KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೩ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೫, ೨೦೦೮ (ಆಶ್ವಯುಜ ೩, ಶಕ ವರ್ಷ ೧೯೩೦) | ಸಂಚಿಕೆ ೩೯ |
|---|---|---|



## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಯವರು, ಸಾಗರ ಉಪವಿಭಾಗ, ಸಾಗರ**

**ಕ್ರಮಸಂಖ್ಯೆ: ಎ.ಆರ್.25/ಸಿ.ಇ.ಪಿ.103/ 2004–05, ದಿನಾಂಕ:30ನೇ ಆಗಸ್ಟ್, 2008**

**ವಿಷಯ:** ಶ್ರೀ ಗಣಪತಿ ಅರ್ಬನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಸಾಗರ ಇದರ ಅಮಲಜಾರಿ ಅರ್ಜಿ ಸಂಖ್ಯೆ: 103/2004–05ಕ್ಕೆ ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ ನಿಯಮ 38(6) (ಎ) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ: 1932/ 03–04.
2) ಅಮಲಜಾರಿ ಅರ್ಜಿ ಸಂಖ್ಯೆ: ಸಿ.ಇ.ಪಿ. 103/04–05.
3) ಮಾರಾಟಾಧಿಕಾರಿಯವರ ನಡವಳಿ ದಿನಾಂಕ:22.01.2008.

**ಪ್ರಸ್ತಾವನೆ:**

ಶ್ರೀ ಅಹಮ್ಮದ್ ಬಿನ್ ಹಸನ್ ಸಾಬ್ ಇವರು ಶ್ರೀ ಗಣಪತಿ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಸಾಗರ ಈ ಬ್ಯಾಂಕಿನಲ್ಲಿ ಸದಸ್ಯತ್ವ ಸಂಖ್ಯೆ: ಎಸ್‌ಹೆಚ್ 44/54 ರಂತೆ ಸದಸ್ಯರಾಗಿ ಬ್ಯಾಂಕಿನಿಂದ ದಿನಾಂಕ:15.07.1999 ರಂದು ರೂ.75,000/– (ಎಪ್ಪತ್ತೈದು ಸಾವಿರ ರೂಪಾಯಿ) ಗಳನ್ನು ಸ್ಥಿರಾಸ್ತಿ ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರು ಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು ಸಾಲದ ಬಾಕಿ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರನ್ವಯ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ್ಯ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: 1932/03–04 ರಂತೆ ದಾವಾ ಹೂಡಿ ಡಿಕ್ರಿ ಪಡೆದಿದ್ದರೂ ಸಾಲದ ಬಾಕಿ ವಸೂಲಾತಿಯಾಗಿರುವುದಿಲ್ಲ.

ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ್ಯ, ಬೆಂಗಳೂರು ಇವರ ನ್ಯಾಯಾಲಯದಿಂದ ಪಡೆದ ಡಿಕ್ರಿ ಆದೇಶಾನುಸಾರ ಶ್ರೀ ಗಣಪತಿ ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಸಾಗರ ಈ ಬ್ಯಾಂಕಿನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 31(1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಾಧಿಕಾರಿಗಳು, ಸಾಗರ ಇವರ ಕಛೇರಿಯಲ್ಲಿ ಅಮಲಜಾರಿ ಅರ್ಜಿ ಸಂಖ್ಯೆ:103/ 04–05 ರಂತೆ ದಾಖಲ್ಮಾಡಿ ಅಮಲಜಾರಿಯನ್ನು ಪಡೆದು, ಸದರಿ ಅಮಲಜಾರಿ ಅರ್ಜಿಯನ್ನು ವಿಲೇವಾರಿ ಮಾಡಲು ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಮಾರಾಟಾಧಿಕಾರಿಯವರು ಅಮಲಜಾರಿ ಅರ್ಜಿಯನ್ನು ವಿಲೇವಾರಿಗೊಳಿಸಲು ಬಾಕಿದಾರರು ಬ್ಯಾಂಕಿಗೆ ಆಧಾರ ಮಾಡಿದ್ದ ಸ್ಥಿರ ಸ್ವತ್ತನ್ನು ಮಾರಾಟ ಮಾಡಲು ದಿನಾಂಕ:22.01.2008ರಂದು ಹರಾಜಿಗೆ ತಂದಿರುತ್ತಾರೆ. ದಿನಾಂಕ:22.01.2008 ರಂದು ನಡೆದ ಸಾರ್ವಜನಿಕ ಹರಾಜಿನಲ್ಲಿ ಒಟ್ಟು 5 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀಮತಿ ನಫೀಸಾ ಯಾನೆ ರಜಿಯಾ ಸಾಗರ ಇವರು 2,00,000.00 ರೂ.ಗಳಿಗೆ (ರೂ. ಎರಡು ಲಕ್ಷಗಳಿಗೆ) ಬಿಡ್ ಮಾಡಿ ಅತೀ ಹೆಚ್ಚಿನ ಬಿಡ್ಡುದಾರರಾಗಿರುತ್ತಾರೆ.

ಡಿಕ್ರಿ ಆದೇಶ ಮತ್ತು ಅಮಲಜಾರಿ ಅರ್ಜಿಯನ್ವಯ ದಿನಾಂಕ:22.01.2008 ಕ್ಕೆ ಅಸಲು ರೂ.75,000–00 ಬಡ್ಡಿ ಮತ್ತು ಇತರೇ ವೆಚ್ಚ ರೂ.134049–00 ಹೀಗೆ ಒಟ್ಟು 209049.00 ರೂ.ಗಳು ಬ್ಯಾಂಕಿಗೆ ಬರಬೇಕಾಗಿರುತ್ತದೆ. ರೂ.200000/– ಕ್ಕೆ ಬಿಡ್ ಮಾಡಿದ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀಮತಿ ನಫೀಸಾ ಯಾನೆ ರಜಿಯಾ ಸಾಗರ, ಇವರು ಬಿಡ್ಡಿನ ಮೊತ್ತದ ಶೇಕಡಾ 15% ರೂ.30,000/– ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿಗೆ ಪಾವತಿ ಮಾಡಿರುತ್ತಾರೆ. ಉಳಿಕೆ ಬಾಕಿ ಮೊತ್ತ ರೂ.1,70,000/–ಗಳನ್ನು ದಿನಾಂಕ:07.02.2008 ರಂದು ಪಾವತಿ ಮಾಡಿರುತ್ತಾರೆ.

ಶ್ರೀ ಗಣಪತಿ ಅರ್ಬನ್ ಕೋ–ಆಪರೇಟಿವ್ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ:22.01.2008ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿದ್ದು, ಶ್ರೀ ಅಹಮ್ಮದ್ ಬಿನ್ ಹಸನ್ ಸಾಬ್ ರವರ ಸ್ಥಿರಾಸ್ತಿಯನ್ನು ಶ್ರೀಮತಿ ನಫೀಸಾ ಯಾನೆ ರಜಿಯಾ ಸಾಗರ ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3)ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:22.01.2008ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಸ್ಥಿರಾಸ್ತಿ ಹರಾಜು ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಹರಾಜಿನಲ್ಲಿ ಒಟ್ಟು 5 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀಮತಿ ನಫೀಸಾ ಯಾನೆ ರಜಿಯಾ ಸಾಗರ, ಇವರಿಗೆ ರೂ.200000–00 ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ, ಬಹಿರಂಗ ಹರಾಜು ನಡೆದ 45 ದಿನಗಳೊಳಗೆ ಬಾಕಿದಾರರು ವಾದಿ ಬ್ಯಾಂಕಿಗೆ ಕೊಡಬೇಕಾದ ಬಾಕಿ ಸಾಲವನ್ನು ಮರು ಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಈ ಕಛೇರಿಗೆ ಯಾವುದೇ ಆಕ್ಷೇಪಣೆಯನ್ನು ಸಲ್ಲಿಸದೇ ಇರುವುದರಿಂದ ದಿನಾಂಕ:22.01.2008ರಂದು ನಡೆಸಿದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿ ಯವರು ಸಲ್ಲಿಸಿದ ವರದಿಯನ್ನು ಕೂಲಂಕುಶವಾಗಿ ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನು ಬದ್ಧವಾಗಿದೆ ಎಂದು ಕಂಡು ಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ನಾಗೇಶ್ ಎಸ್. ಡೋಂಗರೆ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಸಾಗರ ಉಪವಿಭಾಗ, ಸಾಗರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)(ಎ) ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ.69 ಸಿ.ಎಲ್.ಎಂ.01, ದಿನಾಂಕ:21.11.2001 ಹಾಗೂ ಸಿ.ಎಂ.ಡಬ್ಲ್ಯೂ.295 ಸಿ.ಎಲ್.ಎಂ.2005 ದಿನಾಂಕ:21.08.2006ರ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲಜಾರಿ ಅರ್ಜಿ ಸಂಖ್ಯೆ:103/04–05 ರಲ್ಲಿ ಶ್ರೀ ಅಹಮ್ಮದ್ ಬಿನ್ ಹಸನ್ ಸಾಬ್ ಇವರ ಸದಸ್ಯತ್ವ ಸಂಖ್ಯೆ:44/54 ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ:22.01.2008ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ಮಾಡಿದ ಬಹಿರಂಗ ಹರಾಜಿನಲ್ಲಿ ಶ್ರೀಮತಿ ನಫೀಸಾ ಯಾನೆ ರಜಿಯಾ ಸಾಗರ, ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿದ್ದು, ಇವರಿಗೆ ರೂ.2,00,000–00 ಗಳಿಗೆ ಈ ಕೆಳಗೆ ವಿವರಿಸಿರುವ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸುತ್ತೇನೆ.

**ಸ್ಥಿರಾಸ್ತಿಯ ವಿವರ**

ಸಾಗರ ಟೌನ್ 1ನೇ ಡಿವಿಜನ್ ಎಸ್.ಎನ್. ನಗರ ಚೌಡಿಕಟ್ಟೆ ಖಾತೆ ನಂ1924 ಅ.ನಂ.1704 ನಿವೇಶನ ಅಳತೆ 30x45 ಅಡಿ ಇದರಲ್ಲಿ ರೀಪು, ಪಕಾಶಿ, ಹಂಚು ಹೊದಿಸಿದ ಮನೆ, ಇದಕ್ಕೆ ಸೇರಿದ ಹಿತ್ತಲು, ಮುಂಚೆ ಅಡಿ ಸ್ಥಳ ವಗೈರೆ.

**ಚೆಕ್ಕುಬಂದಿ:**

ಪೂರ್ವಕ್ಕೆ: ಪುರಸಭೆ ಜಾಗ

ಪಶ್ಚಿಮಕ್ಕೆ: ಪುರಸಭೆ ರಸ್ತೆ

ಉತ್ತರಕ್ಕೆ: ರಜಿಯಾಬಿ ಇವರ ಸೊತ್ತು ಗಡಿ

ದಕ್ಷಿಣಕ್ಕೆ : ಸಮದ್ ರವರ ಜಾಗ ಗಡಿ

ಮಾರಾಟ ಮೊಬಲಗು ರೂ.2,00,000.00

ಮಾರಾಟ ಮಾಡಿದ ದಿನಾಂಕ:22.01.2008

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:30.08.2008 ರಂದು ನೀಡಲಾಗಿದೆ.

**ನಾಗೇಶ್ ಎಸ್. ಡೋಂಗರೆ**

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾಧಿಕಾರಿಗಳು, ಸಾಗರ
ಉಪವಿಭಾಗ, ಸಾಗರ.

**GOVERNMENT OF KARNATAKA**

**CO-OPERATIVE DEPARTMENT**

**FORM NO.10**

**CERTIFICATE OF SALE ISSUED UNDER RULE 38(7) OF KARNATAKA CO-OPERATIVE SOCIETIES RULES 1960**

Name: Nagesh S. Dongare,

Asst. Registrar of Co-operative Societies and recovery Officer, Sagar Sub Division, Sagar.

3. DECREE No. 1932/03-04

4. Execution Petition No. CEP 103/ 04-05

| **Decree Holder:** | **Judgement Debtor:** |
|---|---|
| Chief Executive Officer, Sri Ganapathi Urban Co.op. Bank Ltd. Sagar-Shimoga District. | Ahamed S/o Hasan Sab, Areca Merchant, 4th Cross, S.N. Nagara, New Extension, SAGAR. |

This is to certify that Nafeesa @ Raziya. has purchased at a public auction held by the Sale Officer Sri Ganapathi Urban Co-operative Bank Ltd., Sagar the under mentioned immovable property for arrears due to Sri Ganapathi Urban Co-operative Bank Ltd., Sagar by Ahamed S/o Hasan Sab, Execution Award No. 1932/03-04 Dated:28.11.2003 on the file of the Joint Registrar of Co-operative Societies, Bangalore Division, Bangalore and has paid the full amount of the purchase money i.e. Rs.2,00,000/-

**Schedule of Property**

**REGISTRATION DISTRICT : SHIMOGA**

**SUB REGISTRAR OFFICE : SAGAR**

**VILLAGE : SAGAR TOWN.**

| Property Asst. No. | Kind of Property | Extent (Measurement of Site) |
|---|---|---|
| K.No.1924<br>Asst.No.1704 | Residential House at<br>S.N.Nagar, Chowdikatte, Sagar. | 30ft x 45 ft |

**BOUNDARIES**

| EAST | WEST | NORTH | SOUTH |
|---|---|---|---|
| Municipal Property | Municipal Road | Smt. Raziya Bi property | Summad's property |

Sale Price : Rs. 2,00,000/-

Date of Sale : 22.01.2008.

Given under my hand and seal this the 30th day of August, 2008.

WITNESS: PURCHASER.

1.

Assistant Registrar of
Co-operative Societies & Recovery Officer.
Sagar Sub Division, Sagar.

PR-1065

**ಲೇವಾದೇವಿಗಾರರ ನಿಬಂಧಕರು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು–03**

**ಪ್ರಕಟಣೆ**

**ಕ್ರ.ಸಂ. ಲೇ(ನಿ)/ ಪ್ರಕಟಣೆ/65/ 2008–09, ದಿನಾಂಕ:15ನೇ ಸೆಪ್ಟೆಂಬರ್, 2008**

ಬೆಂಗಳೂರು ನಗರ ಜಿಲ್ಲೆಯಲ್ಲಿ ದಿನಾಂಕ:31.03.2007ಕ್ಕೆ 2007–2008 ರಿಂದ 2011–2012 ರ 5 ವರ್ಷದ ಅವಧಿಯವರೆಗೆ ಲೇವಾದೇವಿ/ ಹಣಕಾಸು ಸಂಸ್ಥೆ ಮತ್ತು ಗಿರವಿ ಪರವಾನಿಗೆಯನ್ನು ನವೀಕರಿಸಿಕೊಳ್ಳಲು 53 ಸಂಸ್ಥೆಗಳು ಬಾಕಿ ಇದ್ದು, ಪರವಾನಿಗೆಯನ್ನು ನವೀಕರಿಸಿಕೊಳ್ಳಲು ಈ ಕಛೇರಿಯ ನೋಟೀಸ್ ಸಂಖ್ಯೆ: ಸನಿಲೇದೇ/ ನವೀಕರಣ/ 65/2007–08 ದಿನಾಂಕ:13.09.2007 ಮತ್ತು ದಿನಾಂಕ:26.09.2007 ಗಳಂದು ದೃಢೀಕೃತ ಅಂಚೆಯ ಮೂಲಕ ನೋಟೀಸ್ ನೀಡಿದ್ದರೂ ಸಹ

ಪರವಾನಿಗೆ ನವೀಕರಿಸಿಕೊಂಡಿರುವುದಿಲ್ಲ. ಆದ್ದರಿಂದ, ಈ ಪ್ರಕಟಣೆ ಹೊರಡಿಸಿದ 15 ದಿವಸದೊಳಗೆ ಪರವಾನಿಗೆ ನವೀಕರಿಸಿಕೊಳ್ಳಲು/ ಪರವಾನಿಗೆ ರದ್ದುಪಡಿಸಿಕೊಳ್ಳಲು ಅರ್ಜಿಸಲ್ಲಿಸಲು ಸಂಬಂಧಪಟ್ಟವರಿಗೆ ತಿಳಿಸಲಾಗಿದೆ. ತಪ್ಪಿದಲ್ಲಿ ಈ ಕೆಳಕಂಡ ಪರವಾನಿಗೆ ಖಾತಾ ಸಂಖ್ಯೆಗಳನ್ನು ಹೊಂದಿರುವ ಸಂಸ್ಥೆಗಳ ಪರವಾನಿಗೆಯನ್ನು ರದ್ದುಪಡಿಸಿ, ಕರ್ನಾಟಕ ಲೇವಾದೇವಿ ಕಾಯ್ದೆ 1961 ಕಲಂ 7ಬಿ. ಗಿರವಿ ಕಾಯ್ದೆ 1961ರ ಕಲಂ 4ಬಿ. ರೀತ್ಯಾ ಅವರು ಜಮಾ ಮಾಡಿರುವ ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಎಂದು ಈ ಪ್ರಕಟಣೆ ಮೂಲಕ ಸಂಬಂಧಪಟ್ಟವರಿಗೆ/ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸಲಾಗಿದೆ.

**ಪರವಾನಿಗೆ ಖಾತೆ ಸಂಖ್ಯೆ**

5647, 5658, 5659, 5660, 5681, 5652, 5667, 5668, 5674, 5702, 5714, 5727, 5737, 5740, 5741, 5743, 5744, 5759, 5771, 5773, 5775, 5779, 5782, 5716, 5770, 5797, 5831, 5774, 5783, 5794, 5840, 5845, 5850, 5856, 5865, 5870, 5878, 5882, 5895, 5897, 5894, 5839, 5932, 5934, 5945, 5969, 5921, 5920, 5911, 5910, 5902, 5679, 5723.

**ಎಂ. ವೆಂಕಟಸ್ವಾಮಿ**
ಲೇವಾದೇವಿಗಾರರ ನಿಬಂಧಕರು,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು–03.

**2007–08ನೇ ಸಾಲುಗಳಿಗೆ ನವೀಕರಣವಾಗಬೇಕಾಗಿರುವ ಲೇವಾದೇವಿ/ ಗಿರವಿ ಹಾಗೂ ಹಣಕಾಸು ಸಂಸ್ಥೆಗಳ ಪಟ್ಟಿ**

| ಕ್ರಮ ಸಂಖ್ಯೆ | ಖಾತೆ ಸಂಖ್ಯೆ | ವಿಳಾಸ |
|---|---|---|
| 1. | 5647 | ಮೆ: ನಿಮಿಷಾಂಬ ಫೈನಾನ್ಸ್ ನಂ.425, ಸರಸ್ವತಿ ನಗರ, ವಿಜಯನಗರ, ಬೆಂಗಳೂರು–40. |
| 2. | 5658 | ಮೆ: ಮಂಜುನಾಥ ಎಂಟರ್‌ಪ್ರೈಸಸ್ ನಂ.7, ಕ್ರಿಸ್ಸೆ ವಿಲ್ಲಾ, ದೇವಸಂದ್ರ ಮುಖ್ಯರಸ್ತೆ, ಕೆ.ಆರ್.ಪುರಂ, ಬೆಂಗಳೂರು–36. |
| 3. | 5659 | ಮೆ ಅನುಶ್ರೀ ಫೈನಾನ್ಸ್ ನಂ.25/3 ಜಿ.ಕೆ.ಎಂ. ಕಾಲೇಜು ರಸ್ತೆ, ಜರಗನಹಳ್ಳಿ, ಕನಕಪುರ ರಸ್ತೆ, ಜೆ.ಪಿ.ನಗರ ಪೋಸ್ಟ್, ಬೆಂಗಳೂರು–78. |
| 4. | 5660 | ಮೆ: ಶ್ರೀ ಬಾಲಗುರುಮೂರ್ತಿ ಫೈನಾನ್ಸ್, 2ನೇ ಮುಖ್ಯ ರಸ್ತೆ, ಬಿ.ಎಸ್.ಕೆ. 3ನೇ ಹಂತ, ಚನ್ನಮ್ಮಕೆರೆ ಅಚ್ಚುಕಟ್ಟು, ಬೆಂಗಳೂರು–85. |
| 5. | 5681 | ಮೆ: ವೆಂಕಟೇಶ್ವರ ಫೈನಾನ್ಸ್ ನಂ.265/1, 1ನೇ ಮುಖ್ಯರಸ್ತೆ, 2ನೇ ಕ್ರಾಸ್, ಯಶವಂತಪುರ, ಬೆಂಗಳೂರು–22. |
| 6. | 5652 | ಮೆ: ರಾಮ್‌ದೇವ್ ಬ್ಯಾಂಕರ್ಸ್ ಪಾನ್ ಬ್ರೋಕರ್, ದೇವರಚಿಕ್ಕನಹಳ್ಳಿ ಮುಖ್ಯರಸ್ತೆ, ಬನ್ನೇರುಘಟ್ಟರಸ್ತೆ, ಬಿಳೇಕಹಳ್ಳಿ, ಬೆಂಗಳೂರು–76. |
| 7. | 5667 | ಮೆ: ಮಮತ ಪಾನ್ ಬ್ರೋಕರ್ಸ್, ನಂ.18–4, 22ನೇ ಕ್ರಾಸ್, ಮರಿಯಪ್ಪನಪಾಳ್ಯ, ಭುವನೇಶ್ವರಿನಗರ, ಬೆಂಗಳೂರು–23. |
| 8. | 5668 | ಮೆ: ಪವನ್ ಬ್ಯಾಂಕರ್ಸ್, ನಂ.65, 1ನೇ ಮುಖ್ಯರಸ್ತೆ, ಕಮಲಾನಗರ, ಬೆಂಗಳೂರು–79. |
| 9. | 5674 | ಮೆ: ಅಕ್ಷಯ್ ಫೈನಾನ್ಸ್, ನಂ.3, ಅಕ್ಷಯ ಬಸಪ್ಪ ಲೇಔಟ್, ಸಂಜಯನಗರ, ಬೆಂಗಳೂರು–94. |
| 10. | 5702 | ಮೆ: ವಯಾ ಕ್ರೆಡಿಟ್ ಇಂಕ್, ನಂ.1312, ಡಬ್ಬಲ್ ರಸ್ತೆ, 2ನೇ ಸ್ಟೇಜ್, ಇಂದಿರಾನಗರ, ಬೆಂಗಳೂರು–38. |
| 11. | 5714 | ಮೆ: ಶ್ರೀ ಲಕ್ಷ್ಮೀಫೈನಾನ್ಸ್, ನಂ.74/3, 5ನೇ ಮುಖ್ಯರಸ್ತೆ, ರಾಮಚಂದ್ರ ಅಗ್ರಹಾರ, ಚಾಮರಾಜಪೇಟೆ, ಬೆಂಗಳೂರು–18. |
| 12. | 5727 | ಮೆ: ದುರ್ಗಾಪರಮೇಶ್ವರಿ ಫೈನಾನ್ಸ್ ಲೇವಾದೇವಿಗಾರರು, ನಂ.378, 13ನೇ ಅಡ್ಡರಸ್ತೆ, 7ನೇ ಮುಖ್ಯರಸ್ತೆ, ರಾಜೇಂದ್ರನಗರ, ಕೋರಮಂಗಲ, 2ನೇ ಹಂತ, ಬೆಂಗಳೂರು–47. |
| 13. | 5737 | ಮೆ: ಶ್ರೀ ಲಕ್ಷ್ಮೀನರಸಿಂಹ ಫೈನಾನ್ಸ್, ನಂ.3789, 14ನೇ ಕ್ರಾಸ್, 2ನೇ ಮುಖ್ಯರಸ್ತೆ, ಗಾಯತ್ರಿನಗರ, ಬೆಂಗಳೂರು–21. |

| ಕ್ರಮ ಸಂಖ್ಯೆ | ಖಾತೆ ಸಂಖ್ಯೆ | ವಿಳಾಸ |
|---|---|---|
| 14. | 5740 | ಮೆ: ಎಸ್.ಎಲ್.ವಿ. ಎಂಟರ್ ಪ್ರೈಸಸ್, ನಂ.48/1, ಪೈಪ್ ಲೈನ್ ರಸ್ತೆ, ವಿಜಯನಗರ, 2ನೇ ಸ್ಟೇಜ್, ಬೆಂಗಳೂರು–560 040. |
| 15. | 5741 | ಮೆ: ಪಾರ್ಶ್ವನಾಥ ಫೈನಾನ್ಸ್ (ಆರ್), ನಂ.46ಎ/ 31, 6ನೇ "ಎ" ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ, 1ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು–79. |
| 16. | 5743 | ಮೆ: ಸರಸ್ವತಿ ಫೈನಾನ್ಸ್, ಕೆರೆಕೋಡಿ ರಸ್ತೆ, ಸರಸ್ವತಿ ನಿಲಯ, ಯಲಹಂಕ, ಬೆಂಗಳೂರು–64. |
| 17. | 5744 | ಮೆ: ಶ್ರೀ ಗಣೇಶ್ ಫೈನಾನ್ಸಿಯರ್, ನಂ.638, ಮುನಿಗಂಗ ಚೌಲ್ಟ್ರಿ ಎದುರು, 8ನೇ "ಬಿ" ಮುಖ್ಯರಸ್ತೆ, 3ನೇ ಸ್ಟೇಜ್, 2ನೇ ಬ್ಲಾಕ್, ವೆಸ್ಟ್ ಆಫ್ ಕಾರ್ಡ್ ರಸ್ತೆ, ಬಸವೇಶ್ವರನಗರ, ಬೆಂಗಳೂರು–79. |
| 18. | 5759 | ಮೆ: ಶ್ರೀ ರೇವತಿ ಫೈನಾನ್ಸ್, ನಂ.ಎ3–486, ಇಡಬ್ಲ್ಯೂಎಸ್, ಬಿಡಿಎ ಪ್ಲಾಟ್ಸ್, 2ನೇ ಹಂತ, 5ನೇ ಮುಖ್ಯರಸ್ತೆ, ದೊಮ್ಮಲೂರು, ಬೆಂಗಳೂರು–71. |
| 19. | 5771 | ಮೆ: ಭಗವತಿ ಫೈನಾನ್ಸಿಯಲ್ ಸರ್ವೀಸಸ್ ನಂ.6, ಅಪ್ ಸ್ಟೇಯರ್ಸ್, ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರನಗರ, ಬೆಂಗಳೂರು–79. |
| 20. | 5773 | ಮೆ: ಸಹನಾ ಫೈನಾನ್ಸ್, ನಂ.223, 6ನೇ ಕ್ರಾಸ್, ಸರಸ್ವತಿ ಕಮ್ಯುನಿಟಿ ಹಾಲ್ ರಸ್ತೆ, ಸರಸ್ವತಿಪುರಂ, ನಂದಿನಿ ಲೇಔಟ್, ಬೆಂಗಳೂರು–96. |
| 21. | 5775 | ಮೆ: ಕೆ.ಪಿ. ನಟರಾಜ್ ಮನಿಲೆಂಡರ್, ನಂ.60/61, 1ನೇ ಮಹಡಿ, 1ನೇ ಕ್ರಾಸ್, ಸೊಸೈಟಿ ಕಾಲೋನಿ, ಆಡುಗೋಡಿ, ಬೆಂಗಳೂರು–30. |
| 22. | 5779 | ಮೆ: ವರಲಕ್ಷ್ಮಿ ಫೈನಾನ್ಸ್, ನಂ.859, 1ನೇ ಮಹಡಿ, 1ನೇ ಮುಖ್ಯರಸ್ತೆ, ಯಶವಂತಪುರ, ಬೆಂಗಳೂರು–22. |
| 23. | 5782 | ಮೆ: ಬೃಂದಾವನ್ ಫೈನಾನ್ಸ್ ನಂ.379, 18ನೇ "ಈ" ಮುಖ್ಯರಸ್ತೆ, 6ನೇ "ಎ" ಬ್ಲಾಕ್, ಕೋರಮಂಗಲ, ಬೆಂಗಳೂರು–95 |
| 24. | 5716 | ಮೆ: ಮಹದೇವ್ ಬ್ಯಾಂಕರ್ಸ್, ನಂ.1441, ಆರ್.ಕೆ. ಕಾಂಪ್ಲೆಕ್ಸ್ ಎದುರು, ಜ್ಯೂಬಿಲಿ ಶಾಲೆ ರಸ್ತೆ, ವಿಜಿನಾಪುರ, ದೂರವಾಣಿನಗರ, ಬೆಂಗಳೂರು–16. |
| 25. | 5770 | ಮೆ: ಪವನ್ ಬ್ಯಾಂಕರ್ಸ್ ಅಂಡ್ ಜ್ಯೂಯಲರ್ಸ್, 4, 6ನೇ 'ಎ' ಮುಖ್ಯರಸ್ತೆ, ಜೆ.ಸಿ.ನಗರ, ಕುರುಬರಹಳ್ಳಿ, ಬೆಂಗಳೂರು–86. |
| 26. | 5797 | ಮೆ: ಸಾಯಿ ಫೈನಾನ್ಸ್ (ಆರ್) ನಂ.325, 4ನೇ ಕ್ರಾಸ್, ಮಾರುತಿನಗರ, ಭದ್ರಪ್ಪ ಲೇಔಟ್, ನಾಗಶೆಟ್ಟಿಹಳ್ಳಿ, ಬೆಂಗಳೂರು–32. |
| 27. | 5774 | ಮೆ: ಆನಂದ್ ಬ್ಯಾಂಕರ್ಸ್, ನಂ.343, 7ನೇ ಕ್ರಾಸ್, 5ನೇ ಬ್ಲಾಕ್, 3ನೇ ಫೇಸ್, ಭುವನೇಶ್ವರಿನಗರ, ಬೆಂಗಳೂರು–85. |
| 28. | 5831 | ಮೆ: ಶ್ರೀ ವಿನಾಯಕ ಫೈನಾನ್ಸ್ ಕಾರ್ಪೊರೇಷನ್ (ರಿ) ನಂ.280, ಕೋಗಿಲು ಲೇಔಟ್, ಬೆಳ್ಳಳ್ಳ ಮುಖ್ಯರಸ್ತೆ, ಯಲಹಂಕ, ಬೆಂಗಳೂರು–64. |
| 29. | 5783 | ಮೆ: ಕುಂದನ್ ಬ್ಯಾಂಕರ್ಸ್ ಪಾನ್ ಬ್ರೋಕರ್<br>ದೊಡ್ಡಣ್ಣನ್ರ ಮುಖ್ಯರಸ್ತೆ, ಕಾವಲ್ ಭೈರಸಂದ್ರ, ಬೆಂಗಳೂರು–32. |
| 30. | 5794 | ಮೆ: ಅಂಬೇ ಬ್ಯಾಂಕರ್ಸ್, ನಂ.1, ಎಸ್.ಎಸ್. ಕಾಂಪ್ಲೆಕ್ಸ್, ಐ.ಟಿ.ಪಿ.ಎಲ್. ರಸ್ತೆ, ಕುಂದಲಹಳ್ಳಿ, ಬೆಂಗಳೂರು–37. |
| 31. | 5840 | ಮೆ: ಸುಮನ್ ಬ್ಯಾಂಕರ್ಸ್, ನಂ.1654, 1ನೇ ಮುಖ್ಯ ರಸ್ತೆ, ಕಾಮಾಕ್ಷಮ್ಮ ಲೇಔಟ್, ಯಲಹಂಕ ಹಳೇ ಟೌನ್, ಬೆಂಗಳೂರು–560 064. |
| 32. | 5845 | ಮೆ: ಎ.ಎಸ್.ಎಂ. ಎಂಟರ್ ಪ್ರೈಸಸ್, ನಂ.20, ಬಸವೇಶ್ವರ ಲೇಔಟ್, 3ನೇ ಕ್ರಾಸ್, ನಾಗಶೆಟ್ಟಿಹಳ್ಳಿ, ಬೆಂಗಳೂರು. |
| 33. | 5850 | ಮೆ: ಶ್ರೀ ಎ.ಎನ್. ಫೈನಾನ್ಸ್, ನಂ.144, ಹೊಸ ಕಾಲೋನಿ, 3ನೇ ಅಡ್ಡರಸ್ತೆ, ಬನಶಂಕರಿ 2ನೇ ಹಂತ, ಕಾವೇರಿ ನಗರ, ಬೆಂಗಳೂರು–94. |

| ಕ್ರಮ ಸಂಖ್ಯೆ | ಖಾತೆ ಸಂಖ್ಯೆ | ವಿಳಾಸ |
|---|---|---|
| 34. | 5856 | ಮೆ: ಬನಶಂಕರಿ ಫೈನಾನ್ಸ್ ನಂ.69/3, 4ನೇ ಕ್ರಾಸ್, ಚನ್ನಯ್ಯನಪಾಳ್ಯ, ಬೆಂಗಳೂರು-30. |
| 35. | 5865 | ಮೆ: ಶರತ್ ಎಂಟರ್ ಪ್ರೈಸಸ್, ನಂ1/7, 2ನೇ ಮುಖ್ಯ ರಸ್ತೆ, 6ನೇ ಕ್ರಾಸ್, ಬಿಂಕಾ ಪ್ಲಾಜಾ, ಗಾಂಧಿನಗರ, ಕಾನಿಷ್ಕ ಹೋಟೆಲ್ ಹತ್ತಿರ, ಬೆಂಗಳೂರು-560 009. |
| 36. | 5870 | ಮೆ: ಮಣಿಕಂಠ ಫೈನಾನ್ಸ್, ನಂ.40/2, ವಿನೋಬನಗರ ಮುಖ್ಯರಸ್ತೆ, ಹೆಚ್.ಸಿದ್ದಯ್ಯ ರಸ್ತೆ, ಬೆಂಗಳೂರು-27. |
| 37. | 5878 | ಮೆ: ಶ್ರೀರಾಮ ಫೈನಾನ್ಸ್ ನಂ.87, ಮಿಲ್ಕ್ ಕಾಲೋನಿ, ಮಲ್ಲೇಶ್ವರಂ ವೆಸ್ಟ್, ಬೆಂಗಳೂರು-03. |
| 38. | 5882 | ಮೆ: ಶ್ರೀ ಶಿರಡಿಸಾಯಿಬಾಬ ಎಂಟರ್ ಪ್ರೈಸಸ್, ನಂ.53/2, ರಿಸಲ್ ವಾರ್ ಸ್ಟ್ರೀಟ್ ಶೇಷಾದ್ರಿಪುರಂ, ಬೆಂಗಳೂರು-20. |
| 39. | 5895 | ಮೆ: ಶ್ರೀ ಸತ್ಯನಾರಾಯಣ ಫೈನಾನ್ಸ್ ನಂ.132, 15ನೇ ಮುಖ್ಯರಸ್ತೆ, 3ನೇ ಹಂತ, 4ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು-79. |
| 40. | 5897 | ಮೆ: ಎಂ.ಎಂ.ಎಸ್. ಎಂಟರ್ ಪ್ರೈಸಸ್, ನಂ.10, 13ನೇ ಕ್ರಾಸ್, ರಮೇಶನಗರ, ಬೆಂಗಳೂರು-37. |
| 41. | 5894 | ಮೆ: ಜಿ.ಎಸ್. ಬ್ಯಾಂಕರ್ಸ್, ನಂ.731, 58ನೇ ಕ್ರಾಸ್, ಕುಮಾರಸ್ವಾಮಿ ಲೇಔಟ್, ಬೆಂಗಳೂರು-79. |
| 42. | 5839 | ಮೆ: ಸುನಿಲ್ ಬ್ಯಾಂಕರ್ಸ್, ನಂ.16/2, 21ನೇ ಕ್ರಾಸ್, 5ನೇ ಮುಖ್ಯರಸ್ತೆ, ಭುವನೇಶ್ವರಿನಗರ, ಕೆ.ಪಿ. ಅಗ್ರಹಾರ, ಬೆಂಗಳೂರು-23. |
| 43. | 5932 | ಮೆ: ಗಣಪತಿ ಅಂಡ್ ಕಂ., ಪಾನ್ ಬ್ರೋಕರ್ ನಂ.74, ಹಳೆ ಪೆನ್‌ಷನ್‌ಲೈನ್, ಮೈಸೂರು ರಸ್ತೆ ಕ್ರಾಸ್, ಬೆಂಗಳೂರು-18. |
| 44. | 5934 | ಮೆ: ನಾಕೋಡಾ ಬ್ಯಾಂಕರ್ಸ್, ದೇವಸ್ಥಾನದ ಮುಖ್ಯರಸ್ತೆ, ದೊಡ್ಡಣ್ಣನಗರ, ಕಾವಲ್‌ಭೈರಸಂದ್ರ, ಬೆಂಗಳೂರು-32. |
| 45. | 5945 | ಮೆ: ಮಾ ಗಾಯಿತ್ರಿ ಬ್ಯಾಂಕರ್ಸ್ ಅಂಡ್ ಜ್ಯೂಯಲರ್ಸ್, ನಂ.4, ಮಾರುತಿ ಕಾಂಪ್ಲೆಕ್ಸ್, ಮಲ್ಲಸಂದ್ರ ಮುಖ್ಯರಸ್ತೆ, ಬೆಂಗಳೂರು-57. |
| 46. | 5969 | ಮೆ: ಶ್ರೀ ವೆಂಕಟೇಶ್ವರ ಫೈನಾನ್ಸ್ ಕಾರ್ಪೋರೇಷನ್, ನಂ.2, ಗೋವಿಂದಪ್ಪ ಬಿಲ್ಡಿಂಗ್, ಅಶ್ವಿನಿ ನರ್ಸಿಂಗ್ ಹೋಂ ಎದುರು, ಯಲಹಂಕ, ಬೆಂಗಳೂರು-64. |
| 47. | 5921 | ಮೆ: ಓಂ ಸಾಯಿ ಫೈನಾನ್ಸ್, ನಂ.80, 7ನೇ ಕ್ರಾಸ್, 1ನೇ ಮುಖ್ಯರಸ್ತೆ, ಕೆ.ಆರ್. ಲೇಔಟ್, ಜೆ.ಪಿ.ನಗರ, 6ನೇ ಫೇಸ್, ಬೆಂಗಳೂರು-78. |
| 48. | 5920 | ಮೆ: ಶ್ರೀ ಬಾಲಾಜಿ ಎಂಟರ್ ಪ್ರೈಸಸ್, ನಂ.4, ಬುದ್ದರಸ್ತೆ, ಜೈಭಾರತ್ ನಗರ, ಬೆಂಗಳೂರು-33. |
| 49. | 5911 | ಮೆ: ಆರ್.ಆರ್.ಬಿ. ಎಂಟರ್ ಪ್ರೈಸಸ್, ನಂ.875/ಎ/11/01, ಪೈಪ್‌ಲೈನ್ ರಸ್ತೆ, 'ಎ' ಕ್ರಾಸ್, ಯಶವಂತಪುರ, ಬೆಂಗಳೂರು-22. |
| 50. | 5910 | ಮೆ: ಮೋಹನ್ ಫೈನಾನ್ಸ್ ನಂ.97/ಎ, ಪುಣ್ಯಧಾಮ ಆರ್.ಎಂ.ವಿ. 2ನೇ ಸ್ಟೇಜ್, ಅಶ್ವತ್ಥನಗರ, ಬೆಂಗಳೂರು-94. |
| 51. | 5902 | ಮೆ: ಲಕ್ಷ್ಮಿ ಎಂಟರ್ ಪ್ರೈಸಸ್, ನಂ.100, 2ನೇ ಅಡ್ಡರಸ್ತೆ, ನಂಜಪ್ಪ ಬ್ಲಾಕ್, ಕೆ.ಜಿ.ನಗರ, ಬೆಂಗಳೂರು-19. |
| 52. | 5679 | ಮೆ: ಶ್ರೀ ಪಂಚಮುಖಿ ಫೈನಾನ್ಸ್ ಕಾರ್ಪೋರೇಷನ್, ನಂ.820, ಎಂ.ಇ.ಎಸ್. ರಿಂಗ್ ರಸ್ತೆ, ಮುತ್ಯಾಲಮ್ಮ ನಗರ, ಬೆಂಗಳೂರು-54. |
| 53. | 5723 | ಮೆ: ಶ್ರೀ ವಿನಾಯಕ ಫೈನಾನ್ಸ್, ನಂ.85, 2ನೇ ಕ್ರಾಸ್, 1ನೇ ಮುಖ್ಯರಸ್ತೆ, ರಮಣ್ಣಬ್ಲಾಕ್, ನಂದಿನಿ, ಬಡಾವಣೆ, ಬೆಂಗಳೂರು-86. |

**ಎಂ. ವೆಂಕಟಸ್ವಾಮಿ**

ಪಿ.ಆರ್.1055

ಲೇವಾದೇವಿಗಾರರ ನಿಬಂಧಕರು,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು-560 003.

**KARNATAKA STATE BOARD OF WAKFS**

**[Constituted by the Govt. of Karnataka under the Wakf Act, 1995 (CENTRAL ACT-43 OF 95)]**

**"Darul Awkaf", No.6, Cunningham Road, Bangalore-52**

**Website:www.karwakf.org, E-mail: info@karwakf.org**

**CERTIFICATE OF REGISTRATION**

**No. KTW/REG/15/KPL/2000-01, Dated:25th September, 2001**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl.No. of Kitabul Awkaf | Name, Class & Description of the Wakfs. | Particulars of Wakf properties | Name of the Muthawalli |
|---|---|---|---|
| 37 | Khabrasthan & Idgah Sunni Mangalapur Village, Koppal Taluk. | Sy.No.43<br>**Measuring:**<br>2.27 Acres. situated at Mangalapur.<br>**Bounded:**<br>East: Road.<br>West: 4/1 Lingappa gunta.<br>South: Kullar Road.<br>North: 24/1 Dady Sab Mujawar property. | By its President. |

Chief Executive Officer, Karnataka
State Board of Wakfs.

PD-84

**KARNATAKA STATE BOARD OF WAKFS**

**[Constituted by the Govt. of Karnataka under the Wakf Act, 1995 (CENTRAL ACT-43 OF 95)]**

**"Darul Awkaf", No.6, Cunningham Road, Bangalore-52**

**Website:www.karwakf.org, E-mail: info@karwakf.org**

**CERTIFICATE OF REGISTRATION**

**No. KBW/REG/22/BGM/89-90, Dated:5th August, 2008**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act, 1995.

| Sl.No. of Kitabul Awkaf | Name, Class & Description of the Wakfs. | Particulars of Wakf properties | Name of the Muthawalli |
|---|---|---|---|
| 687 | Additional property to Hatti Asad Khan Dargah Camp, Belgaum District. | 1. Sy.No.245 Area:5 acres-09 Guntas Sanitary Cordon (Grave Yard)<br>**Boundaries:**<br>East: Sy.No.248 of Mastan Shah Dargah<br>West: Chappal Road.<br>North: Sy.No.244.<br>South: Sy.No.246 of Asad Khan Dargah<br>2. Sy.No.246 Area: 0 Acres-26 Guntas (Asad Khan Dargah)<br>**Boundaries:**<br>East: Sy.No.247 and 248<br>West: Chappal Road,<br>North: Sy.No.245<br>South: Dargah Road. | Managing Committee represented by its President. |

| Sl.No. of Kitabul Awkaf | Name, Class & Description of the Wakfs. | Particulars of Wakf properties | Name of the Muthawalli |
|---|---|---|---|
| | | 3. Sy.No.247<br>Area:6 Acres-47 Guntas, Sanitary Cordon (old Mohamadan graves)<br>**Boundaries:**<br>East:Dargah Road.<br>West: Sy.No.246.<br>North: Sy.No.248.<br>South: Dargah Road.<br>4. Sy.No.248<br>Area:2558 Sq.ft. Old Tomb Mastan Shah Dargah.<br>**Boundaries:**<br>East: Dargah Road.<br>West: Sy.No.245 and 246.<br>North: Club Road.<br>South: Sy.No.247. | |

This certificate is issued as per the powers delegated in order No.KBW/11/ADM/05-06, Dated:02.03.2006 of the Karnataka State Board of Wakfs.

Addl. Chief Executive Officer,
PD-85 Karnataka State Board of Wakfs.

**SUPER FINE CREDIT & INVESTMENTS PRIVATE LIMITED**

**Regd. Office:221, Upper Palace Orchards, Bellary Road, Bangalore-560 080**

**NOTICE**

NOTICE is hereby given that a special resolution under Section 484 of the Companies Act, 1956 has been passed at an Extra-Ordinary General Meeting of the members of the company held on Monday, the 25th day of August 2008 for members voluntary winding up of the company and appointment of Mr.AL Annamalai as liquidator of the company.

Bangalore
Date:25.08.2008 Director/ Liquidator.

**FORM NO.151**

**[See Rule 315]**

**COMPANIES ACT, 1956**

**Members' (or Creditor's) Voluntary Winding-up**

**Notice of Appointment of Liquidator pursuant to Section 516**

Name of Company : Super Fine Credit and Investment Pvt. Ltd.,
Nature of Business : Investments
Address of Registered Office : 221, Upper Palace Orchards, Bellary Road, Bangalore-560 080.
Name and Address of Liquidator : AL ANNAMALAI
221, Upper Palace Orchards, Bellary Road, Bangalore-560 080.
Date of Appointment : 25.08.2008
By whom appointed : Members of the Company at the EGM held on 25.08.2008.

Bangalore
Date:25.08.2008 LIQUIDATOR.

**FORM NO.152**

**[See Rule 315]**

**COMPANIES ACT, 1956**

**Members' (or Creditor's) Voluntary Winding-up**

**Notice of Appointment of Liquidator or pursuant to Section 516**

Name of Company : Super Fine Credit and Investment Pvt. Ltd.,

Nature of Business : Investments

Presented by : AL Annamalai

To

The Registrar of Companies,

I AL. Annamalai Director of Superfine Credit & Investments Pvt. Ltd., 221, Upper Palace Orchards Bellary Road, Bangalore hereby give Notice that I have been appointed liquidator of Superfine Credit & Investments Pvt. Ltd by resolution of the company Dated:25.08.2008.

Dated this 25th day of August, 2008.

PD-86 Signature.

**ಜಿಲ್ಲಾಧಿಕಾರಿಗಳ ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ**

**ಅಧಿಸೂಚನೆ**

**ಸಂಖ್ಯೆ: ಎಂಎಜಿ (2) ವಿವ.17/ 2007-08, ದಿನಾಂಕ:4ನೇ ಸೆಪ್ಟೆಂಬರ್, 2008**

**ವಿಷಯ:** ಶಿವಮೊಗ್ಗ ನಗರದ ಕುವೆಂಪು ರಸ್ತೆಯ ಎಡ ಮತ್ತು ಬಲ ಭಾಗಗಳಲ್ಲಿ ವಾಹನ ನಿಲುಗಡೆ ನಿಷೇಧ ಮಾಡುವ ಬಗ್ಗೆ.

**ಉಲ್ಲೇಖ:** ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಇವರ ಪತ್ರ ನಂ. ಸಿ463 ಡಿಸಿಆರ್‌ಬಿ 7 ದಿನಾಂಕ:08.10.2007.

ಶಿವಮೊಗ್ಗ ನಗರದ ಕುವೆಂಪು ರಸ್ತೆಯಲ್ಲಿ ದಿನೇ ದಿನೇ ವಾಹನ ಸಂಚಾರ ಹೆಚ್ಚಾಗುತ್ತಿದ್ದು, ಸಂಚಾರ ವ್ಯವಸ್ಥೆ ಸುಗಮಗೊಳಿಸುವ ನಿಟ್ಟಿನಲ್ಲಿ ಶಿವಮೂರ್ತಿ ವೃತ್ತದಿಂದ ಜ್ಯುವೆಲ್ ರಾಕ್ ಕ್ರಾಸ್‌ವರೆಗೆ ನಿರ್ದಿಷ್ಟ ಸ್ಥಳಗಳಲ್ಲಿ ವಾಹನ ನಿಲುಗಡೆ ನಿಷೇಧ ಕುರಿತಂತೆ ಅಧಿಸೂಚನೆ ಹೊರಡಿಸಲು ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಇವರು ಉಲ್ಲೇಖಿತ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಬಗ್ಗೆ ಸಾರ್ವಜನಿಕ/ ಸಂಘ ಸಂಸ್ಥೆಗಳಿಂದ ಆಕ್ಷೇಪಣೆ ಹಾಗೂ ಸಲಹೆಗಳನ್ನು ಆಹ್ವಾನಿಸಿ ಪ್ರಕಟಣೆಯನ್ನು ದಿನಾಂಕ:24.01.2008ರ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ (ಪುಟ ಸಂಖ್ಯೆ: 219 ಭಾಗ-3) ಪ್ರಕಟಣೆಯು ಪ್ರಕಟಗೊಂಡ 30 ದಿನಗಳ ಒಳಗಾಗಿ ಆಕ್ಷೇಪಣೆ ಸಲ್ಲಿಸಲು ಸೂಚಿಸಲಾಗಿತ್ತು. ದಿನಾಂಕ:07.11.2007 ರಂದು ಈ ಕಛೇರಿಯಿಂದ ಹೊರಡಿಸುವ ಪ್ರಕಟಣೆಗೆ ಅನುಗುಣವಾಗಿ ಕುವೆಂಪು ರಸ್ತೆಯ ಸತೀಶ್ ಟೈರ್ಸ್ ಹಾಗೂ ಡಾ: ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲು ವೃತ್ತ) ದ ಸುತ್ತಮುತ್ತಲಿನ ವರ್ತಕರು ಪ್ರಸ್ತಾವನೆಗೆ ಆಕ್ಷೇಪಣೆ ಸಲ್ಲಿಸಿರುತ್ತಾರೆ.

ಈ ಕುರಿತಂತೆ ದಿನಾಂಕ:11.08.2008 ರಂದು ಆಕ್ಷೇಪಣೆದಾರರ ವಿಚಾರಣೆ ನಡೆಸಲಾಯಿತು. ಈ ಪೈಕಿ ಡಾ: ಬಿ.ಆರ್. ಅಂಬೇಡ್ಕರ್ ವೃತ್ತದ (ಜೈಲು ವೃತ್ತ) ವರ್ತಕರು ಮಳಿಗೆಯ ಸಮೀಪದಲ್ಲಿ ವಾಹನ ನಿಲುಗಡೆಗೆ ಅವಕಾಶವಿಲ್ಲದಿರುವುದರಿಂದ ವ್ಯಾಪಾರಕ್ಕೆ ಧಕ್ಕೆ ಉಂಟಾಗುವುದೆಂದು ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿಕೊಡಲು ಕೋರಿರುತ್ತಾರೆ. ಆದರೆ ರಸ್ತೆಯ ಸಮೀಪದ ಪ್ರದೇಶಗಳಲ್ಲಿ ಹಾಗೂ ಅಂಗಡಿಗಳ ಸಮೀಪ ವಾಹನಗಳನ್ನು ನಿಲ್ಲಿಸಲು ಪರ್ಯಾಯ ಅವಕಾಶ ಇರುವುದರಿಂದ ಸಾರ್ವಜನಿಕರ ಹಿತಾಸಕ್ತಿಯ ಮೇರೆಗೆ ಮತ್ತು ಸುಗಮ ಸಂಚಾರದ ದೃಷ್ಟಿಯಿಂದ, ವರ್ತಕರ/ ಅಂಗಡಿ ಮಾಲೀಕರು ಸಲ್ಲಿಸಿರುವ ಆಕ್ಷೇಪಣೆಯನ್ನು ಪರಿಗಣಿಸುವುದು ಸೂಕ್ತವಲ್ಲವೆಂದು ಪರಿಗಣಿಸಿ, ಮೋಟಾರು ವಾಹನ ಕಾಯ್ದೆ 117 ಹಾಗೂ ಪೊಲೀಸ್ ಕಾಯ್ದೆ 31(1) (ಬಿ) ಅನ್ವಯ ಅನುಸೂಚಿಯಲ್ಲಿ ಕಾಣಿಸಿರುವಂತೆ, ಶಿವಮೊಗ್ಗ ನಗರದ ಕುವೆಂಪು ರಸ್ತೆಯ ಶಿವಮೂರ್ತಿ ವೃತ್ತದಿಂದ ಜ್ಯುವೆಲ್ ರಾಕ್ ಹೋಟೆಲ್ ಕ್ರಾಸ್‌ವರೆಗೆ ವಾಹನ ನಿಲುಗಡೆ ವ್ಯವಸ್ಥೆಗೆ ಈ ಕೆಳಕಂಡಂತೆ ಪ್ರಕಟಣೆಯನ್ನು ಅಂತಿಮಗೊಳಿಸಿ ಆದೇಶ ನೀಡಿದ್ದೇನೆ.

**ಅನುಸೂಚಿ**

| | |
|---|---|
| 1. | **ಜ್ಯುವೆಲ್‌ರಾಕ್ ಕ್ರಾಸ್‌ನಿಂದ ಡಾ: ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲು ವೃತ್ತ)ದ ವರೆಗೆ:** ಬಲ ಮತ್ತು ಎಡಭಾಗದಲ್ಲಿ ವಾಹನ ನಿಲುಗಡೆ ನಿಷೇಧ. |
| 2. | **ಡಾ: ಬಿ.ಆರ್. ಅಂಬೇಡ್ಕರ್ ವೃತ್ತ (ಜೈಲು ವೃತ್ತ) ದಿಂದ ನಂಜಪ್ಪ ಆಸ್ಪತ್ರೆ ವರೆಗೆ:** ಬಲ ಮತ್ತು ಎಡಭಾಗಗಳಲ್ಲಿ ವಾಹನಗಳ ನಿಲುಗಡೆ ನಿಷೇಧ. |
| 3. | **ಆರ್ಯ ವೈಶ್ಯ ಸಹಕಾರ ಸಂಘದಿಂದ ಜಿಲ್ಲಾ ಪಂಚಾಯತ್ ಕ್ರಾಸ್‌ವರೆಗೆ:** ಬಲ ಭಾಗದಲ್ಲಿ ಕಾರು, ಜೀಪು ಮತ್ತು ದ್ವಿಚಕ್ರ ವಾಹನಗಳ ನಿಲುಗಡೆ ಸ್ಥಳ. |
| 4. | **ಜಿಲ್ಲಾ ಪಂಚಾಯತ್ ಕ್ರಾಸ್‌ನಿಂದ ಶಿವಮೂರ್ತಿ ಸರ್ಕಲ್‌ವರೆಗೆ:** ಬಲಭಾಗದಲ್ಲಿ ವಾಹನಗಳ ನಿಲುಗಡೆ ನಿಷೇಧ, ಎಡಭಾಗದಲ್ಲಿ ಎಲ್ಲಾ ವಾಹನಗಳ ನಿಲುಗಡೆ ಸ್ಥಳ. |

ಜಿಲ್ಲಾ ದಂಡಾಧಿಕಾರಿ,
ಶಿವಮೊಗ್ಗ ಜಿಲ್ಲೆ.

ಪಿ.ಆರ್.1056

**ಜಿಲ್ಲಾಧಿಕಾರಿಗಳ ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ**

**ಅಧಿಸೂಚನೆ**

**ಸಂಖ್ಯೆ: ಎಂಎಜಿ (2) ವಿವ.24/ 2007–08, ದಿನಾಂಕ:10ನೇ ಸೆಪ್ಟೆಂಬರ್, 2008**

**ವಿಷಯ:** ಶಿವಮೊಗ್ಗ ನಗರದ ಬಾಲರಾಜ ಅರಸ್ ರಸ್ತೆ ಸರ್ವಜ್ಞ ವೃತ್ತದಿಂದ ಸರ್ಕಾರಿ ನೌಕರರ ಭವನದ ಬಡಾವಣೆ ರಸ್ತೆಯಲ್ಲಿ ಎಲ್ಲಾ ಸರಕು ಸಾಗಣೆ (ಭಾರೀ ವಾಹನಗಳ) ಸಂಚಾರ ನಿಷೇಧ ಮಾಡುವ ಬಗ್ಗೆ ಅಧಿಸೂಚನೆ ಹೊರಡಿಸುವ ಕುರಿತು.

**ಉಲ್ಲೇಖ:** ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಇವರ ಪತ್ರ ನಂ. ಹೆಚ್‌ಸಿ 3 ಡಿಸಿಆರ್‌ಬಿ 2008 ದಿನಾಂಕ:27.07.2008.

ಶಿವಮೊಗ್ಗ ನಗರದ ಬಾಲರಾಜ್ ಅರಸ್ ರಸ್ತೆಯ ಸರ್ವಜ್ಞ ವೃತ್ತ (ಕೆ.ಇ.ಬಿ. ಸರ್ಕಲ್) ದಿಂದ ಶಂಕರಮಠ ವೃತ್ತಕ್ಕಾಗಲೀ ಅಥವಾ ಶಂಕರಮಠ ವೃತ್ತದಿಂದ ಸರ್ವಜ್ಞ ವೃತ್ತಕ್ಕಾಗಲೀ ಸರ್ಕಾರಿ ನೌಕರರ ಭವನದ ಮುಂಭಾಗದ ರಸ್ತೆಯಲ್ಲಿ ಸರಕು ಸಾಗಣೆ (ಭಾರೀ ವಾಹನಗಳ ಸಂಚಾರ) ನಿಷೇಧ ಮಾಡುವ ಬಗ್ಗೆ ಮೋಟಾರು ವಾಹನಗಳ ಕಾಯ್ದೆ ಕಲಂ 115 ಮತ್ತು 116ರ ಅನ್ವಯ ಅಧಿಸೂಚನೆ ಹೊರಡಿಸಲು ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಉಲ್ಲೇಖಿತ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಸರ್ವಜ್ಞ ವೃತ್ತದಿಂದ ಶಂಕರಮಠ ವೃತ್ತಕ್ಕೆ ಹೋಗುವಾಗ ಹೊನ್ನಾಳಿ ರೈಲ್ವೆ ಗೇಟ್ ಮುಖಾಂತರ ವಾಹನಗಳು ಸಂಚರಿಸದೇ ಸರ್ಕಾರಿ ನೌಕರರ ಭವನದ ಮುಂಭಾಗದ ರಸ್ತೆಯ ಮುಖಾಂತರ ಸಂಚರಿಸುತ್ತಿರುತ್ತವೆ. ಈ ರಸ್ತೆಯು ತುಂಬಾ ಕಿರಿದಾಗಿದ್ದು ಎರಡೂ ಭಾಗದಲ್ಲಿ ವಾಸದ ಮನೆಗಳು ಹೆಚ್ಚಾಗಿದ್ದು, ಭಾರೀ ವಾಹನಗಳು ನಿರಂತರವಾಗಿ ಸಂಚರಿಸುವುದರಿಂದ ಅಲ್ಲಿಯ ನಿವಾಸಿಗಳಿಗೆ ತೊಂದರೆಯೊಂದಿಗೆ ಶಬ್ದ ಮಾಲಿನ್ಯ ಹಾಗೂ ವಾಯು ಮಾಲಿನ್ಯ ಉಂಟಾಗುತ್ತಿರುವುದು ಸತ್ಯಾಂಶವಾಗಿರುತ್ತದೆ. ಅಲ್ಲದೇ ಈ ರಸ್ತೆ ಮಾರ್ಗದಲ್ಲಿ ಮುಖ್ಯವಾಗಿ ಶಾಲಾ ಮಕ್ಕಳು, ವೃದ್ಧರು ಹೆಚ್ಚಿನ ಸಂಖ್ಯೆಯಲ್ಲಿ ಓಡಾಡುತ್ತಿರುವುದರಿಂದ ಇವರುಗಳ ಸುರಕ್ಷತಾ ದೃಷ್ಟಿಯಿಂದ ಅಲ್ಲಿನ ನಿವಾಸಿಗಳು ಸಲ್ಲಿಸಿರುವ ಮನವಿಯನ್ನು ಆದ್ಯತೆ ಮೇರೆಗೆ ಪರಿಗಣಿಸಬೇಕಾಗಿರುತ್ತದೆ. ಅಲ್ಲಿಯ ನಿವಾಸಿಗಳು ಸಲ್ಲಿಸಿರುವ ದೂರು ಮನವಿಯ ಬಗ್ಗೆ ಪೊಲೀಸ್ ಅಧಿಕಾರಿಗಳು ನಡೆಸಿದ ಸಾರ್ವಜನಿಕ ದೂರು ಸಭೆಯ ವಿಚಾರಣೆ ಸಂದರ್ಭದಲ್ಲಿ ಇದು ಸತ್ಯಸಂಗತಿ ಎಂದು ತಿಳಿದು ಬಂದಿರುತ್ತದೆ.

ಪ್ರಸ್ತಾವನೆಯಲ್ಲಿರುವ ಸಮಸ್ಯೆಗಳನ್ನು ಬಗೆಹರಿಸಿ ಸಾರ್ವಜನಿಕರ ಹಾಗೂ ಬಡಾವಣೆ ನಿವಾಸಿಗಳ ಹಿತರಕ್ಷಣೆಯನ್ನು ಗಮನದಲ್ಲಿಟ್ಟುಕೊಂಡು ಅನುಸೂಚಿಯಲ್ಲಿ ನಮೂದಿಸಿರುವಂತೆ ಅನುಷ್ಠಾನಗೊಳಿಸುವುದು ಸೂಕ್ತವೆಂದು ಮನಗಂಡು ಮೋಟಾರು ವಾಹನ ಕಾಯ್ದೆ ಕಲಂ 115 ಹಾಗೂ 116ರ ಅನ್ವಯ ಭಾರೀ ಮತ್ತು ಸರಕು ಸಾಗಣೆ ವಾಹನ ಸಂಚಾರವನ್ನು ನಿಷೇಧಿಸಿ ಆದೇಶ ಹೊರಡಿಸಿದೆ.

**ಅನುಸೂಚಿ**

1) ಬಾಲರಾಜ ಅರಸ್ ರಸ್ತೆಯ ಸರ್ವಜ್ಞ ವೃತ್ತದಿಂದ (ಕೆ.ಇ.ಬಿ. ಸರ್ಕಲ್) ಶಂಕರಮಠ ವೃತ್ತಕ್ಕಾಗಲೀ ಅಥವಾ ಶಂಕರಮಠ ವೃತ್ತದಿಂದ ಬಾಲರಾಜ ಅರಸ್ ರಸ್ತೆಯ ಸರ್ವಜ್ಞ ವೃತ್ತಕ್ಕಾಗಲೀ ಸರ್ಕಾರಿ ನೌಕರರ ಭವನದ ಎದುರು ಭಾಗದ ರಸ್ತೆಯಲ್ಲಿ ಭಾರೀ ಮತ್ತು ಸರಕು ಸಾಗಣೆ ವಾಹನ ಸಂಚಾರವನ್ನು ನಿಷೇಧಿಸಿದೆ.

2) ಶಂಕರಮಠ ವೃತ್ತದಿಂದ ಸರ್ವಜ್ಞ ವೃತ್ತಕ್ಕೆ ಬರುವ ಭಾರೀ ಮತ್ತು ಸರಕು ಸಾಗಣೆ ವಾಹನಗಳು ಶಿವಮೊಗ್ಗ ರೈಸ್ ಮಿಲ್ ಹೊನ್ನಾಳಿ ರೈಲ್ವೆ ಗೇಟ್ ಹತ್ತಿರ ರಸ್ತೆಯ ಮುಖಾಂತರ ಮತ್ತು ಸರ್ವಜ್ಞ ವೃತ್ತದಿಂದ ಶಂಕರಮಠ ರಸ್ತೆಗೆ ಬರುವ ವಾಹನಗಳು ಹೊನ್ನಾಳಿ ರೈಲ್ವೆ ಗೇಟ್ ಹಾಗೂ ಶಿವಮೊಗ್ಗ ರೈಸ್ ಮಿಲ್ ರಸ್ತೆಯ ಮುಖಾಂತರ ಸಂಚರಿಸುವುದು.

ಜಿಲ್ಲಾ ದಂಡಾಧಿಕಾರಿ,
ಶಿವಮೊಗ್ಗ ಜಿಲ್ಲೆ.

ಪಿ.ಆರ್.1057

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
## ಅಧಿಸೂಚನೆ

**ಸಂಖ್ಯೆ: ವಾಕೈ 17 ಜಕೈಸೇ 2008, ಬೆಂಗಳೂರು, ದಿನಾಂಕ:8ನೇ ಸೆಪ್ಟೆಂಬರ್, 2008**

**ವಿಷಯ:** ಕೈಮಗ್ಗ ಮತ್ತು ಜವಳಿ ಇಲಾಖೆಯ ಉಪ ನಿರ್ದೇಶಕರ ಜೇಷ್ಠತಾ ಪಟ್ಟಿ ಕುರಿತು.

ಕೈಮಗ್ಗ ಮತ್ತು ಜವಳಿ ಇಲಾಖೆಯ ಉಪ ನಿರ್ದೇಶಕರ ವೃಂದದ ಕರಡು ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2008ರಲ್ಲಿದ್ದಂತೆ ತಯಾರಿಸಿ ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಪ್ರಕಟಿಸಿದೆ. ಆ ಕುರಿತಂತೆ ಯಾವುದೇ ಆಕ್ಷೇಪಣೆ/ ಸಲಹೆಗಳಿದ್ದಲ್ಲಿ ಅವುಗಳನ್ನು ಈ ಅಧಿಸೂಚನೆ ಪ್ರಕಟಿಸಿದ 30 ದಿನಗಳೊಳಗೆ ಸರ್ಕಾರದ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ರವಿಕುಮಾರ್**
ಪೀಠಾಧಿಕಾರಿ (ಜವಳಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ದಿನಾಂಕ:01.01.2008ರಲ್ಲಿದ್ದಂತೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಉಪ ನಿರ್ದೇಶಕರ ತಾತ್ಕಾಲಿಕ ಜೇಷ್ಠತಾ ಪಟ್ಟಿ**
**ವೇತನ ಶ್ರೇಣಿ ರೂ.18150–26925**
**(ಕೈಮಗ್ಗ ಮತ್ತು ಜವಳಿ ಇಲಾಖೆ ಅಸ್ತಿತ್ವಕ್ಕೆ ಬಂದಾಗಿನಿಂದ)**

| ಕ್ರ. ಸಂ. | ಅಧಿಕಾರಿಗಳ ಹೆಸರು<br>ಶ್ರೀಯುತರು: | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ ಹೊಂದಿದ ದಿನಾಂಕ | ಷರಾ |
|---|---|---|---|---|---|
| 1. | ಝುರಪ್ಪ ಜಿ. ಮೊಳಕೇರಿ | 22.12.1960 | 23.09.1985 | 18.08.2005 | |
| 2. | ಆನಂದ್ ವಿ. ಕಿತ್ತೂರು | 21.02.1960 | 10.09.1985 | 18.08.2005 | |
| 3. | ವಿಜಯ್ ಕುಮಾರ್ ಬಿ. ನಿರಾಳೆ | 30.03.1960 | 10.09.1985 | 18.08.2005 | |
| 4. | ಸಿ.ಎಸ್. ಯೋಗೇಶ್ | 22.06.1967 | 07.01.1994 | 18.08.2005 | |
| 5. | ಎಸ್. ಪ್ರಕಾಶ್ | 14.04.1966 | 11.07.1994 | 18.08.2005 | |
| 6. | ಎ. ಸುರೇಶ್ ಕುಮಾರ್ | 07.06.1965 | 10.01.1994 | 18.08.2005 | |
| 7. | ಎಸ್. ಮುದ್ದಯ್ಯ | 01.01.1964 | 15.07.1994 | 18.08.2005 | |
| 8. | ಬಿ. ಶ್ರೀಧರ್ ನಾಯಕ್ | 30.04.1970 | 03.01.1994 | 07.01.2006 | |
| 9. | ಹೆಚ್.ಎಸ್. ಸೋಮನಗೌಡರ್ | 15.10.1961 | 10.01.1994 | 07.01.2006 | |

ಸಂಖ್ಯೆ: ವಾಕೈ 17 ಜಕೈಸೇ 2008, ದಿನಾಂಕ:08.09.2008

**ಸಿ. ರವಿಕುಮಾರ್**
ಪಿ.ಆರ್.1058
ಪೀಠಾಧಿಕಾರಿ (ಜವಳಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀಮತಿ ಎಂ.ಎನ್. ವಿಜಯ, ಫಾರ್ಮಾಸಿಸ್ಟ್, ಪ್ರಾ.ಆ.ಕೇಂದ್ರ, ಶ್ರವಣಬೆಳಗೊಳ, ಹಾಸನ ಜಿಲ್ಲೆ, ಇವರನ್ನು ಸರ್ಕಾರಿ ಸೇವೆಯಿಂದ ಬಿಡುಗಡೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾ ಆ.ಕು.ಕ. ಅಧಿಕಾರಿಗಳು, ಹಾಸನ ಇವರ ಪತ್ರ ಸಂಖ್ಯೆ: ಸಿಬ್ಬಂದಿ (2) 208: 07–08, ದಿನಾಂಕ:24.07.2007.
2) ಜಿಲ್ಲಾ ಆ.ಕು.ಕ. ಅಧಿಕಾರಿಗಳು ಹಾಸನ ಇವರು ಸ್ಥಳೀಯ ದಿನಪತ್ರಿಕೆಯಲ್ಲಿ ಹೊರಡಿಸಿರುವ ಪ್ರಕಟಣೆ ದಿನಾಂಕ:23.09.2007.

**ಪ್ರಸ್ತಾವನೆ:**

ಶ್ರೀಮತಿ ಎಂ.ಎನ್. ವಿಜಯ, ಫಾರ್ಮಾಸಿಸ್ಟ್, ಪ್ರಾಥಮಿಕ ಆರೋಗ್ಯ ಕೇಂದ್ರ, ಶ್ರವಣಬೆಳಗೊಳ, ಹಾಸನ ಜಿಲ್ಲೆ ಇವರು ದಿನಾಂಕ:27.08.2004 ರಂದು ಸರ್ಕಾರಿ ಕೆಲಸಕ್ಕೆ ನೇಮಕಾತಿ ಹೊಂದಿದ್ದು, ದಿನಾಂಕ:12.10.2005 ರಿಂದ ಸಕ್ಷಮ ಪ್ರಾಧಿಕಾರಕ್ಕೆ ಯಾವ ಮುನ್ಸೂಚನೆಯನ್ನೂ ನೀಡದೆ ಪೂರ್ವಭಾವಿ ಅನುಮತಿ ಪಡೆಯದೇ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಸದರಿ ನೌಕರರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ವೈದ್ಯಾಧಿಕಾರಿಗಳು ಮೂರು ಬಾರಿ ಮರುಕರೆ ನೋಟೀಸನ್ನು ಕಳುಹಿಸಿದ್ದು,

ಎಲ್ಲಾ ಪತ್ರಗಳನ್ನು ಸ್ವೀಕರಿಸಿದ್ದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಉಲ್ಲೇಖ (1)ರಲ್ಲಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಹಾಸನ ಇವರು ವರದಿ ಸಲ್ಲಿಸಿರುತ್ತಾರೆ. ಅಂತಿಮವಾಗಿ ಉಲ್ಲೇಖ (2)ರಲ್ಲಿ ಸ್ಥಳೀಯ ದಿನಪತ್ರಿಕೆಯಲ್ಲಿ ಕರ್ತವ್ಯಕ್ಕೆ ಹಾಜರಾಗುವಂತೆ ಪತ್ರಿಕಾ ಪ್ರಕಟಣೆ ನೀಡಿದ್ದಾಗ್ಯೂ, ನೌಕರರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಸದರಿಯವರು ಪರೀಕ್ಷಾರ್ಥ ಅವಧಿಯಲ್ಲಿ ಅನಧಿಕೃತ ಗೈರು ಹಾಜರಿ ಆಗಿದ್ದು, ಕರ್ತವ್ಯಕ್ಕೆ ಹಾಜರಾಗದೇ ಇರುವುದರಿಂದ, ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಗಳ ನಿಯಮ 5(1) (ಬಿ) ಯಲ್ಲಿ ನೌಕರಳನ್ನು ನೇಮಕ ಮಾಡಿದ ಹುದ್ದೆಗೆ ಯೋಗ್ಯವಲ್ಲವೆಂದು ತೀರ್ಮಾನಿಸಿ ಕರ್ತವ್ಯದಿಂದ ಬಿಡುಗಡೆಗೊಳಿಸಲು ನಿರ್ಣಯಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (3) ಸಿಆರ್:26: 07–08, ಬೆಂಗಳೂರು, ದಿನಾಂಕ:12ನೇ ಫೆಬ್ರವರಿ, 2008**

1977ರ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಗಳ ನಿಯಮ 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಬಿ.ಎಸ್. ಪ್ರೇಮಲೀಲ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ ಎಂ.ಎನ್. ವಿಜಯ, ಫಾರ್ಮಾಸಿಸ್ಟ್, ಪ್ರಾಥಮಿಕ ಆರೋಗ್ಯ ಕೇಂದ್ರ, ಶ್ರವಣಬೆಳಗೊಳ, ಹಾಸನ ಜಿಲ್ಲೆ, ಇವರನ್ನು ನೇಮಕ ಮಾಡಿದ ಹುದ್ದೆಗೆ ಯೋಗ್ಯವಲ್ಲವೆಂದು ನಿರ್ಣಯಿಸಿ, ಸರ್ಕಾರಿ ಸೇವೆಯಿಂದ ಬಿಡುಗಡೆಗೊಳಿಸಿರುತ್ತೇನೆ.

**ಡಾ: ಬಿ.ಎಸ್. ಪ್ರೇಮಲೀಲ**
ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು,
ಬೆಂಗಳೂರು.

ಪಿ.ಆರ್.210

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ–2005 (ಭಾರತ ಸರ್ಕಾರ)**

**ಲೋಕೋಪಯೋಗಿ ಇಲಾಖೆ**

**ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಉಪವಿಭಾಗ, ರಾಣೇಬೆನ್ನೂರು**

**ಕೈಪಿಡಿ:** 1) ಸಂಸ್ಥೆಯ ವಿವರಗಳು, ಕರ್ತವ್ಯ ಮತ್ತು ಕಾರ್ಯಗಳು.

ಈ ಕಛೇರಿಯು ಹಾವೇರಿ ಜಿಲ್ಲೆಯ ರಾಣೇಬೆನ್ನೂರಿನಲ್ಲಿರುತ್ತದೆ. ರಾಣೇಬೆನ್ನೂರು ತಾಲ್ಲೂಕಿನಲ್ಲಿ ಬರುವ ಲೋಕೋಪಯೋಗಿ ಇಲಾಖೆಯ ರಾಜ್ಯ ಹೆದ್ದಾರಿ, ಜಿಲ್ಲಾ ಮುಖ್ಯ ರಸ್ತೆಗಳ ನಿರ್ಮಾಣ ಹಾಗೂ ನಿರ್ವಹಣೆ ಮತ್ತು ಸರ್ಕಾರಿ ಕಟ್ಟಡಗಳ ನಿರ್ಮಾಣ ಹಾಗೂ ನಿರ್ವಹಣೆಯ ಕೆಲಸಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ನಿರ್ವಹಿಸಲಾಗುತ್ತಿದೆ. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಈ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಈ ಕಛೇರಿಯು ಕಾರ್ಯನಿರ್ವಾಹಕ ಇಂಜನೀಯರ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಹಾವೇರಿ, ಅಧೀಕ್ಷಕ ಇಂಜನೀಯರರು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವೃತ್ತ, ಧಾರವಾಡ ಹಾಗೂ ಮುಖ್ಯ ಇಂಜನೀಯರರು ಸ & ಕ (ಉ) ಧಾರವಾಡ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಾರೆ.

2001 ರ ಜನಗಣತಿಯ ಪ್ರಕಾರ ರಾಣೇಬೆನ್ನೂರು ತಾಲ್ಲೂಕಿನ ಜನಸಂಖ್ಯೆಯು 304990 ಇರುತ್ತದೆ. ಈ ಉಪವಿಭಾಗದ ಅಡಿಯಲ್ಲಿ ಬರುವ ರಸ್ತೆ ಹಾಗೂ ಕಟ್ಟಡಗಳ ವಿವರ ಈ ಕೆಳಗಿನಂತಿರುತ್ತದೆ.

(ಅ) ರಸ್ತೆಗಳು: 1) ರಾಜ್ಯ ಹೆದ್ದಾರಿ 84.02 ಕಿ.ಮೀ.
2) ಜಿಲ್ಲಾ ಮುಖ್ಯ ರಸ್ತೆ 137.77 ಕಿ.ಮೀ.

(ಬ) ಸೇತುವೆಗಳು: 11 ಸಂಖ್ಯೆ

(ಕ) ಕಟ್ಟಡಗಳು: 27 ಸಂಖ್ಯೆ

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್, ಇವರು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪವಿಭಾಗ, ರಾಣೇಬೆನ್ನೂರು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1. ತಾಂತ್ರಿಕ ಶಾಖೆ
2. ಆಡಳಿತ ಶಾಖೆ
3. ಲೆಕ್ಕ ಶಾಖೆ
4. ಉಗ್ರಾಣ ಶಾಖೆ

**1) ತಾಂತ್ರಿಕ ಶಾಖೆ:** ತಾಂತ್ರಿಕ ಶಾಖೆಯ ಕೆಲಸಗಳ ನಿರ್ವಹಣೆಗಾಗಿ 3 ಸಹಾಯಕ ಇಂಜನೀಯರರು ಹಾಗೂ ಕಿರಿಯ ಇಂಜನೀಯರರು ಸೇವೆ ಸಲ್ಲಿಸುತ್ತಿರುವವರು ಹಾಗೂ ಇವರಿಗೆ ಸಹಾಯಕರಾಗಿ 2 ಕೆಲಸ ತಪಾಸಿಗರು ಸೇವೆ ಸಲ್ಲಿಸುತ್ತಿರುವರು. ರಾಣೇಬೆನ್ನೂರು ತಾಲ್ಲೂಕಿನಲ್ಲಿ ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ನಿರ್ವಹಣೆ, ನಬಾರ್ಡ್ ಕಾಮಗಾರಿಗಳ ನಿರ್ವಹಣೆ ಹಾಗೂ ಸರ್ಕಾರಿ ಕಟ್ಟಡಗಳ ನಿರ್ಮಾಣ ಮತ್ತು ನಿರ್ವಹಣೆ ಕೆಲಸವನ್ನು ಮಾಡಲಾಗುತ್ತದೆ.

**2) ಆಡಳಿತ ಶಾಖೆ:** ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪವಿಭಾಗ, ರಾಣೇಬೆನ್ನೂರು ಕಛೇರಿಯಲ್ಲಿ 17 ಮಂಜೂರಾದ ಹುದ್ದೆಗಳಿದ್ದು ಅದರಲ್ಲಿ 14 ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಹಾಗೂ ಗ್ರೂಪ್-'ಸಿ' ಯ 2 ಹುದ್ದೆಗಳು ಖಾಲಿ ಇರುತ್ತವೆ.

ಆಡಳಿತ ಶಾಖೆಯಲ್ಲಿ ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಾರೆ. ಆಡಳಿತ ವಿಷಯಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ವೇತನ ಬಿಲ್ಲು ಸಾದಿಲ್ವಾರು ಬಿಲ್ಲು ಹಾಗೂ ಇನ್ನಿತರ ಕಡತಗಳ ನಿರ್ವಹಣೆ ಮತ್ತು ಎಲ್ಲ ದಾಖಲೆಗಳನ್ನು ಸಂಗ್ರಹಿಸುವ, ಕಾಪಾಡುವ ಕಾರ್ಯವನ್ನು ಮಾಡುತ್ತಾರೆ. ಆಡಳಿತ ಶಾಖೆಯಲ್ಲಿ ನಿರ್ವಹಿಸುವ ಕೆಲಸ ಈ ಕೆಳಗಿನಂತಿದೆ.

1) ವೇತನ ವಹಿಯ ನಿರ್ವಹಣೆ

2) ಪ್ರಯಾಣ ಭತ್ಯೆಯ ವಹಿಯ ನಿರ್ವಹಣೆ

3) ಸಾದಿಲ್ವಾರು ಬಿಲ್ಲುಗಳ ನಿರ್ವಹಣೆ

4) ಸರ್ಕಾರಿ ವಸತಿ ಗೃಹ ಪತ್ರ ವ್ಯವಹಾರ

5) ನ್ಯಾಯಾಲಯ ಪ್ರಕರಣಗಳ ಪತ್ರ ವ್ಯವಹಾರ

6) ನೌಕರರ ಸೇವಾ ವಿವರ

7) ಸಾಮಾನ್ಯ ನಗದು ಪುಸ್ತಕ ನಿರ್ವಹಣೆ

8) ಸಿಬ್ಬಂದಿಗಳ ಸೇವಾ ಪುಸ್ತಕ ನಿರ್ವಹಣೆ

9) ಆಡಳಿತ ಶಾಖೆಯ ಮಾಸಿಕ ತ್ರೈಮಾಸಿಕ, ಅರ್ಧವಾರ್ಷಿಕ ಹಾಗೂ ವಾರ್ಷಿಕ ವರದಿ ಸಲ್ಲಿಸುವುದು.

**3) ಲೆಕ್ಕ ಶಾಖೆ:** ಈ ಶಾಖೆಯಲ್ಲಿ ಒಬ್ಬ ಪ್ರಥಮ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಾರೆ. ಈ ಕಛೇರಿಗೆ ಸಂಬಂಧಿಸಿದ ಲೆಕ್ಕ ಶಾಖೆಯ ವಿಷಯಗಳ ಪತ್ರ ವ್ಯವಹಾರ, ಕಾಮಗಾರಿ ನಗದು ಪುಸ್ತಕ ನಿರ್ವಹಣೆ, ಬಿಲ್ಲುಗಳನ್ನು ಪಾವತಿಗಾಗಿ ವಿಭಾಗ ಕಛೇರಿಗೆ ಸಲ್ಲಿಸುವುದು. ಚೆಕ್ ವಿತರಣೆ, ರಸೀದಿ ಪುಸ್ತಕ ನಿರ್ವಹಣೆ ಹಾಗೂ ಹಾಜರಾತಿ ಪುಸ್ತಕ ನಿರ್ವಹಣೆ ಕೆಲಸ ಮಾಡುವುದು.

**4) ಉಗ್ರಾಣ ಶಾಖೆ:** ಈ ಶಾಖೆಯಲ್ಲಿ ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಾರೆ. ದಾಸ್ತಾನು ಸಾಮಗ್ರಿ, ಯಂತ್ರೋಪಕರಣಗಳು, ಟಿ. & ಪಿ. ಸಾಮಗ್ರಿ ಹಾಗೂ ಪ್ರವಾಸಿ ಮಂದಿರ ಸಾಮಗ್ರಿಗಳ ಲೆಕ್ಕ & ಪತ್ರ ವ್ಯವಹಾರ ಉಗ್ರಾಣ ಲೆಕ್ಕ ಪತ್ರ ನಿರ್ವಹಿಸುವುದು, ನಿರುಪಯುಕ್ತ ಸಾಮಗ್ರಿಗಳ ಸರ್ವೇ ವರದಿ ಕುರಿತು ಪತ್ರ ವ್ಯವಹಾರ ಮಾಡುವುದು.

**ಕೈಪಿಡಿ: 2) ಸಂಸ್ಥೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರ ಕಾರ್ಯಭಾರ ಈ ಕೆಳಗಿನಂತಿವೆ.

1) ಕಾಮಗಾರಿಗಳ ಅಳತೆಗಳನ್ನು ಪರಿಶೀಲನೆ ಮಾಡುವುದು.

2) ಮೇಲಾಧಿಕಾರಿಗಳ ತಪಾಸಣೆಯ ಟಿಪ್ಪಣಿಗಳಿಗೆ ಅನುಸರಣಾ ವರದಿ ಸಲ್ಲಿಸುವುದು.

3) ಉಪವಿಭಾಗದ ಸಿಬ್ಬಂದಿ ವಿಷಯ, ಲೆಕ್ಕ ಪತ್ರ ವಿಷಯ, ತಾಂತ್ರಿಕ ವಿಷಯ ಹಾಗೂ ಉಗ್ರಾಣ ವಿಷಯಗಳಿಗೆ ಸಂಬಂಧಿಸಿದ ವ್ಯವಹಾರಗಳನ್ನು ನಿರ್ವಹಿಸುವಲ್ಲಿ ಜವಾಬ್ದಾರರಾಗಿರುತ್ತಾರೆ.

4) ಉಪವಿಭಾಗದಲ್ಲಿ ಸಹಾಯಕ ಇಂಜನೀಯರರು, ಕಿರಿಯ ಇಂಜನೀಯರರು, ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು ಹಾಗೂ ಕೆಲಸ ತಪಾಸಿಗರು ಉಪವಿಭಾಗದ ಕೆಲಸಗಳನ್ನು ಜವಾಬ್ದಾರಿಯುತವಾಗಿ ಕೆಲಸ ನಿರ್ವಹಿಸುವಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರಿಗೆ ಸಹಾಯಕರಾಗಿರುತ್ತಾರೆ.

5) ಮೇಲಾಧಿಕಾರಿಗಳಿಗೆ ನಿಗದಿತ ದಿನಾಂಕದೊಳಗೆ ಎಲ್ಲ ಮಾಹಿತಿಗಳನ್ನು ಸಲ್ಲಿಸುವುದು.

6) ಕಾಮಗಾರಿಗಳ ಅಂದಾಜು ಪತ್ರಿಕೆ, ಕಾಮಗಾರಿಯ ಲೈನಔಟ್ ಕುರಿತು ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಕ್ರಮ ತೆಗೆದುಕೊಳ್ಳಬೇಕು.

7) ಕಾಮಗಾರಿ ನಗದು ಪುಸ್ತಕ, ಸಾಮಾನ್ಯ ನಗದು ಪುಸ್ತಕ, ಉಗ್ರಾಣ ಲೆಕ್ಕ ಪತ್ರ, ಎಂ.ಎ.ಎಸ್. ಆರ್.ಎಂ.ಆರ್. ವಾಹನಗಳ ಲಾಗ್‌ಬುಕ್, ದಿನಚರಿಗಳ ನಿರ್ವಹಣೆಗೆ ಕ್ರಮಕೈಗೊಳ್ಳುವುದು.

8) ಮೇಲಾಧಿಕಾರಿಗಳ ಸಭೆಗೆ ಹಾಜರಾಗುವುದು.

**ಕೈಪಿಡಿ: 3) ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು.**

ಇಲಾಖೆಯು ಕಾಮಗಾರಿಗೆ ಸಂಬಂಧಪಟ್ಟ ನಿರ್ಣಯ ತೆಗೆದುಕೊಳ್ಳುವಲ್ಲಿ, ಈ ಕೆಳಗೆ ನಮೂದಿಸಿದ ಕಾಯ್ದೆ ಕಾನೂನುಗಳನ್ನು ಅನುಸರಿಸಲಾಗುವುದು.

- ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ-1 ಮತ್ತು ಭಾಗ-2.
- ಕರ್ನಾಟಕ ಪಾರದರ್ಶಕ ನಿಯಮ.

- ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2.
- ಭೂ ಸ್ವಾಧೀನ ಕಾಯ್ದೆ.
- ಉಗ್ರಾಣ ಕೈಪಿಡಿ.
- ಮಧ್ಯಸ್ಥಿಕೆ ಕಾಯ್ದೆ.
- ಕರ್ನಾಟಕ ಲಿಟಿಗೇಶನ್ ಕಾಯ್ದೆ.

**ಆಡಳಿತವನ್ನು ನಿರ್ವಹಿಸಲು**

- ಕರ್ನಾಟಕ ನಾಗರಿಕ ಸೇವಾ ನಿಯಾಮಾವಳಿಗಳು.
- ಕರ್ನಾಟಕ ಆರ್ಥಿಕ ಸಂಹಿತೆ.
- ಕರ್ನಾಟಕ ಖಜಾನೆ ಸಂಹಿತೆ.
- ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು.
- ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ.) ನಿಯಮಗಳು.
- ಕರ್ನಾಟಕ ನಾಗರಿಕ ಸೇವಾ (ಪ್ರೋಬೆಶನರಿ) ನಿಯಮಗಳು.

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಎಲ್ಲಾ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ಕೊಡಲಾಗುತ್ತದೆ. ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತದೆ. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು, ಗುತ್ತಿಗೆದಾರರಿಗೆ ಕೆಲಸದ ಸ್ಥಳವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಲೈನ್ಔಟ್ ನೀಡಿ ಕೆಲಸ ಪ್ರಾರಂಭ ಮಾಡಲು ಕ್ರಮ ಕೈಗೊಳ್ಳುತ್ತಾರೆ. ಸಂಬಂಧಿಸಿದ ಸಹಾಯಕ/ ಕಿರಿಯ ಇಂಜನೀಯರರು, ಪ್ರತಿ ನಿತ್ಯ ಕೆಲಸದ ಸ್ಥಳಕ್ಕೆ ಹೋಗಿ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು ಕೆಲಸದ ಸ್ಥಳಕ್ಕೆ ಮೇಲಿಂದ ಮೇಲೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ, ಕಾರ್ಯನಿರ್ವಾಹಕ ಇಂಜನೀಯರರು, ಅಧೀಕ್ಷಕ ಇಂಜಿನೀಯರರು ಹಾಗೂ ಮುಖ್ಯ ಇಂಜನೀಯರರು ಕಾಮಗಾರಿ ಸ್ಥಳಕ್ಕೆ ಭೇಟಿ ನೀಡಿ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಕಾಮಗಾರಿ ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಇಂಜನೀಯರರು, ಅಧೀಕ್ಷಕ ಇಂಜಿನೀಯರರು ಹಾಗೂ ಮುಖ್ಯ ಇಂಜನೀಯರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತದೆ.

ಅಕೌಂಟೆಬಿಲಿಟಿ ಬಗ್ಗೆ ಮಹಾಲೇಖಪಾಲಕರು, 2 ವರ್ಷಕೊಮ್ಮೆ ಸಂಬಂಧಿತ ಉಪವಿಭಾಗ ಕಛೇರಿಗಳ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೆ ಮುಖ್ಯ ಇಂಜನೀಯರವರ ಕಛೇರಿ, ಅಧೀಕ್ಷಕ ಇಂಜನೀಯರವರ ಕಛೇರಿ, ಕಾರ್ಯನಿರ್ವಾಹಕ ಇಂಜನೀಯರವರ ಕಛೇರಿಯಿಂದಲೂ ಉಪವಿಭಾಗಗಳ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರು ಕೂಡ ಕಾಮಗಾರಿಯನ್ನು ಪರಿವೀಕ್ಷಣೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತ ಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ: 4) ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು**

ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ.

ಸರ್ಕಾರಿ ಆದೇಶ ಸಂಖ್ಯೆ: ಪಿಡಬ್ಲ್ಯೂ–1 ಎಫ್.ಸಿ.ಆರ್.–93 ಬೆಂಗಳೂರು ದಿನಾಂಕ:15.12.1994.

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ.

ಸರ್ಕಾರಿ ಆದೇಶ ಸಂಖ್ಯೆ: ಎಫ್.ಡಿ.–1 ಟಿಎಫ್‌ಪಿ–2001 ಬೆಂಗಳೂರು ದಿನಾಂಕ:02.02.2001.

ಲೋಕೋಪಯೋಗಿ ಇಲಾಖೆ ಸಂಹಿತೆ.

ಲೋಕೋಪಯೋಗಿ ಲೆಕ್ಕ ಸಂಹಿತೆ.

**ಕೈಪಿಡಿ: 5) ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು, ಕೈಪಿಡಿಗಳ ವಿವರ:**

**ಕಛೇರಿ ಕೈಪಿಡಿ ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು**

ಕರ್ನಾಟಕ ನಾಗರೀಕ ಸೇವಾ ನಿಯಾಮಾವಳಿಗಳು

ಕರ್ನಾಟಕ ಆರ್ಥಿಕ ಸಂಹಿತೆ.

ಕರ್ನಾಟಕ ಖಜಾನೆ ಸಂಹಿತೆ.

ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ.) ನಿಯಮಗಳು

ಲೋಕೋಪಯೋಗಿ ಇಲಾಖೆ ಸಂಹಿತೆ ಭಾಗ–1 ಮತ್ತು ಭಾಗ–2.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ–2000.

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2

ಭೂ ಸ್ವಾಧೀನ ಕಾಯ್ದೆ
ಉಗ್ರಾಣ ಕೈಪಿಡಿ
ಕರ್ನಾಟಕ ನೀರಾವರಿ ಕಾಯ್ದೆ
ಆಯ್.ಎಸ್. ಕೋಡ್ಸ್
ಸಾದಿಲ್ವಾರು ವೆಚ್ಚದ ಕೈಪಿಡಿ.
ಚಾಲ್ತಿ ದರ ಪಟ್ಟಿ.
ಬಜೆಟ್ ಕೈಪಿಡಿ
ಹೆದ್ದಾರಿ ಕಾಯ್ದೆ–1964 ನಿಯಮಗಳು.

**ಕೈಪಿಡಿ: 6) ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತಃಖ್ತೆ**

**ತಾಂತ್ರಿಕ ಶಾಖೆ:**

1) ಕಾರ್ಯನಿರ್ವಾಹಕ ಇಂಜನೀಯರವರ, ಅಧೀಕ್ಷಕ ಇಂಜನೀಯರವರ ಮತ್ತು ಮುಖ್ಯ ಇಂಜಿನೀಯರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಅದಕ್ಕೆ ಸಂಬಂಧಪಟ್ಟ ಕಡತಗಳು.
2) ಪ್ರಗತಿಯ ವರದಿಗಳು
3) ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ.
4) ಬಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ.
5) ಪಿ.ಡಬ್ಲ್ಯೂ.ಡಿ. ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟಗಳ ವಹಿ.
6) ದರಸೂಚಿ
7) ಆಯವ್ಯಯ ಕಾಮಗಾರಿಗಳ ವಹಿ.
8) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜು ಪಟ್ಟಿ.
9) ಹೆಚ್ಚುವರಿ ಐಟಂ ದರ ಪಟ್ಟಿಯ ವಹಿ.
10) ತುಂಡುಗುತ್ತಿಗೆ ಕರಾರು ಪತ್ರ ವಹಿ
11) ಸೇತುವೆಗಳ ವಹಿ
12) ಕಟ್ಟಡಗಳ ವಹಿ.

**ದಾಖಲೆಗಳು: ಆಡಳಿತ ಶಾಖೆ**

**ಉಪವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ**

1) ಹಾಜರಾತಿ ವಹಿ.
2) ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ ವಹಿ.
3) ಸಂಘಟನಾ ಫಲಕ.
4) ಮಂಜೂರಾತಿ ಹಾಗೂ ಖಾಲಿ ಹುದ್ದೆಗಳ ತಃಖ್ತೆ.
5) ಕೆಲಸ ವಿತರಣೆಯ ತಃಖ್ತೆ.
6) ವೇತನ ಬಡ್ತಿ ಮಂಜೂರಾತಿಯ ವಹಿ.
7) ಇನ್‌ಕಂಬನ್ಸಿ ವಹಿ.
8) ರಹಸ್ಯ ವರದಿಗಳ ವಹಿ.
9) ಆಸ್ತಿ ಹಾಗೂ ಹೊಣೆಗಾರಿಕೆ ಪಟ್ಟಿಗಳ ವಹಿ.
10) ನಿವೃತ್ತಿ ವೇತನ ಪ್ರಕರಣಗಳ ಕುರಿತು ನಿಗಾ ವಹಿ.
11) ಸೇವಾ ಪುಸ್ತಕಗಳ ನಿಗಾವಹಿ.
12) ಇಲಾಖಾ ಪರೀಕ್ಷೆಗಳ ನಿಗಾ ವಹಿ.
13) ಪರಿವೀಕ್ಷಣಾ ಟಿಪ್ಪಣಿ ಪುಸ್ತಕ.
14) ವಿಧಾನ ಸಭೆ, ವಿಧಾನ ಪರಿಷತ್ ಪ್ರಶ್ನೆಗಳ ವಹಿ.
15) ಸ್ಟ್ಯಾಂಪು ವಹಿ.
16) ಸಾಮಾನ್ಯ ಸ್ವೀಕೃತಿ ವಹಿ.
17) ರವಾನೆ ವಹಿ.
18) ಕಛೇರಿಯ ಆದೇಶ ಪುಸ್ತಕ.
19) ಸಾಮಾನ್ಯ ನಗದು ಪುಸ್ತಕ.

20) ವೇತನ ಬಟವಡೆ ವಹಿ.
21) ಪ್ರಯಾಣ ಭತ್ಯೆ ಬಟವಡೆ ವಹಿ.
22) ಸಾದಿಲ್ವಾರು ವೆಚ್ಚ ವಹಿ.

**ಲೆಕ್ಕ ಶಾಖೆ:**

1) ನಗದು ಪುಸ್ತಕ.
2) ಚೆಕ್ ಮೇಮೊ ಪುಸ್ತಕ.
3) ರೆಮಿಟನ್ಸ್ ರಜಿಸ್ಟರ್.
4) ಎಸ್.ಬಿ.ಆರ್.
5) ಚೆಕ್ ಹಾಗೂ ಸ್ವೀಕೃತಿ ರಜಿಸ್ಟರ್.

**ಉಗ್ರಾಣ ಶಾಖೆ:**

1) ದಾಸ್ತಾನು ಸ್ವೀಕೃತಿ ವಹಿ.
2) ದಾಸ್ತಾನು ವಿತರಣಾ ವಹಿ.
3) ಅರ್ಧವಾರ್ಷಿಕ ನಿಯತಕಾಲಿಕ ವಹಿ.
4) ಖಾಲಿ ಸಾಮಗ್ರಿಗಳ ವಹಿ.
5) ಖಾಲಿ ಅಳತೆ ಪುಸ್ತಕಗಳ ವಹಿ.
6) ಕಛೇರಿಯ ಪಿಠೋಪಕರಣಗಳ ವಹಿ.
7) ಲೇಖನ ಸಾಮಗ್ರಿಗಳ ವಹಿ.
8) ಯಂತ್ರೋಪಕರಣಗಳ ವಹಿ.
9) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕ.

**ಕೈಪಿಡಿ: 7) ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.**

ಏನೂ ಇರುವುದಿಲ್ಲ.

**ಕೈಪಿಡಿ: 8) ಇಲಾಖೆಯಲ್ಲಿ ನಿಗಮ/ ಪರಿಷತ್ತು/ ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡುವಳಿಗಳೂ ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.**

ಏನೂ ಇರುವುದಿಲ್ಲ.

**ಕೈಪಿಡಿ: 9) ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ.**

ಈ ಇಲಾಖೆಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್, ಇವರ ಅಧಿಕಾರದ ಬಗ್ಗೆ ಕೈಪಿಡಿ 2 ರಲ್ಲಿ ಈಗಾಗಲೇ ನಮೂದಿಸಲಾಗಿದೆ.

**ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ) ಈ ಕೆಳಗಿನಂತಿದೆ.**

| ಕ್ರ. ಸಂ. | ಹುದ್ದೆ | ಹೆಸರು |
|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್–1 | ಶ್ರೀ ಬಿ.ಎಸ್. ಪಾಟೀಲ |
| 2. | ಸಹಾಯಕ ಇಂಜನೀಯರ–3 | 1) ಶ್ರೀ ಹೆಚ್.ವೈ. ಆನಂದ<br>2) ಶ್ರೀ ವ್ಹಿ.ಆರ್. ಹಿರೇಗೌಡರ<br>3) ಶ್ರೀ ಡಿ.ಎಲ್. ಕಲ್ಲೋಳಿಕರ |
| 3. | ಕಿರಿಯ ಇಂಜನೀಯರ್–1 | 1) ಶ್ರೀ ಎಸ್.ವ್ಹಿ. ಪುರಾಣಿಕ |
| 4. | ಪ್ರಥಮ ದರ್ಜೆ ಸಹಾಯಕರು–1 | 1) ಶ್ರೀ ಎ.ಪಿ. ಕುಲಕರ್ಣಿ |
| 5. | ದ್ವಿತೀಯ ದರ್ಜೆ ಸಹಾಯಕರು–2 | 1) ಶ್ರೀ ಸತ್ಯನಾರಾಯಣ ಸಬ್<br>2) ಶ್ರೀ ಎಸ್.ಎಂ. ಹಂಚಿನಾಳ |
| 6. | ಕೆಲಸ ತಪಾಸಿಗರು–5 | 1) ಶ್ರೀ ಸಿ.ಡಿ. ಪವಾರ<br>2) ಶ್ರೀ ಎಸ್.ಡಿ. ಜೋಶಿ<br>3) ಶ್ರೀ ಎಫ್.ಎಫ್. ಹೋರಕೇರಿ<br>4) ಖಾಲಿ<br>5) ಖಾಲಿ |

| ಕ್ರ. ಸಂ. | ಹುದ್ದೆ | ಹೆಸರು |
|---|---|---|
| 7. | ಜವಾನರು–2 | 1) ಶ್ರೀ ಕೆ.ಬಿ. ಗುರ್ಕಾವರ<br>2) ಶ್ರೀ ಎನ್.ಈ. ರಾಠೋಡ |
| 8. | ಚೌಕೀದಾರರು | 1) ಶ್ರೀ ಸಿ.ಡಿ. ನದಾಫ್<br>2) ಶ್ರೀ ಆಯ.ಎ. ಒಚಿಟಿ.<br>3) ಶ್ರೀಮತಿ ಜೆ. ಹೇಮಲತಾ |
| | **ಸೂಪರ್‌ನ್ಯೂಮರರಿ ಹುದ್ದೆಗಳು** | |
| 1. | ಪದವೀದರ ಸಹಾಯಕ | ಶ್ರೀ ಎಸ್.ಐ. ವಿರಕ್ತಮಠ |
| 2. | ನಾನ್ ಎಸ್.ಎಸ್.ಎಲ್.ಸಿ. | ಶ್ರೀ ಬಿ.ಹೆಚ್. ಸಿದ್ದಯ್ಯ |
| 3. | ಸ್ವೀಪರ್ | ಶ್ರೀ ಇ.ಸಿ. ತಳವಾರ |

**ಕೈಪಿಡಿ: 10) ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದವರ ತಿಂಗಳ/ ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರವರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗುತ್ತಿದೆ.

| ಕ್ರಮ ಸಂಖ್ಯೆ | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ–1 | ಶ್ರೀ ಬಿ.ಎಸ್. ಪಾಟೀಲ | 14050–25050 | 15200.00 |
| 2. | ಸಹಾಯಕ ಇಂಜನೀಯರ–3 | 1) ಶ್ರೀ ಹೆಚ್.ವೈ. ಆನಂದ<br>2) ಶ್ರೀ ವ್ಹಿ.ಆರ್. ಹಿರೇಗೌಡರ<br>3) ಶ್ರೀ ಡಿ.ಎಲ್. ಕಲ್ಲೋಳಿಕರ | 14050–25050<br>12000–22650<br>11400–21600 | 19500.00<br>14800.00<br>12000.00 |
| 3. | ಕಿರಿಯ ಇಂಜನೀಯರ್–1 | 1) ಶ್ರೀ ಎಸ್.ವ್ಹಿ. ಪುರಾಣಿಕ | 11400–21600 | 15600.00 |
| 4. | ಪ್ರಥಮ ದರ್ಜೆ ಸಹಾಯಕರು–1 | 1) ಶ್ರೀ ಎ.ಪಿ. ಕುಲಕರ್ಣಿ | 8000–14800 | 9750.00 |
| 5. | ದ್ವಿತೀಯ ದರ್ಜೆ ಸಹಾಯಕರು–2 | 1) ಶ್ರೀ ಸತ್ಯನಾರಾಯಣ ಸಬ್<br>2) ಶ್ರೀ ಎಸ್.ಎಂ. ಹಂಚಿನಾಳ | 7275–13350<br>5800–10500 | 9050.00<br>5800.00 |
| 6. | ಕೆಲಸ ತಪಾಸಿಗರು–5 | 1) ಶ್ರೀ ಸಿ.ಡಿ. ಪವಾರ<br>2) ಶ್ರೀ ಎಸ್.ಡಿ. ಜೋಶಿ<br>3) ಶ್ರೀ ಎಫ್.ಎಫ್. ಹೋರಕೇರಿ<br>4) ಖಾಲಿ<br>5) ಖಾಲಿ | 7275–13350<br>5800–10500<br>5800–10500<br>––<br>–– | 11700.00<br>8400.00<br>7275.00<br>––<br>–– |
| 7. | ಜವಾನರು–2 | 1) ಶ್ರೀ ಕೆ.ಬಿ. ಗುರ್ಕಾವರ<br>2) ಶ್ರೀ ಎನ್.ಈ. ರಾಠೋಡ | 5200–8200<br>4800–7275 | 6800.00<br>5800.00 |
| 8. | ಚೌಕೀದಾರರು | 1) ಶ್ರೀ ಸಿ.ಡಿ. ನದಾಫ್<br>2) ಶ್ರೀ ಆಯ.ಎ. ಒಚಿಟಿ.<br>3) ಶ್ರೀಮತಿ ಜೆ. ಹೇಮಲತಾ | 5500–9500<br>4800–7275<br>4800–7275 | 7800<br>5800<br>5000 |
| | | **ಸೂಪರ್‌ನ್ಯೂಮರರಿ ಹುದ್ದೆಗಳು** | | |
| 1. | ಪದವೀದರ ಸಹಾಯಕ | ಶ್ರೀ ಎಸ್.ಐ. ವಿರಕ್ತಮಠ | 5800–10500 | 6125.00 |
| 2. | ನಾನ್ ಎಸ್.ಎಸ್.ಎಲ್.ಸಿ. | ಶ್ರೀ ಬಿ.ಹೆಚ್. ಸಿದ್ದಯ್ಯ | 4800–7275 | 6500.00 |
| 3. | ಸ್ವೀಪರ್ | ಶ್ರೀ ಇ.ಸಿ. ತಳವಾರ | 4800–7275 | 5800.00 |

**ಕೈಪಿಡಿ–11) ಇಲಾಖೆಯಲ್ಲಿರುವ ವಲಯ/ ವಿಭಾಗಗಳಿಗೆ ನೀಡಿದ ಆಯವ್ಯಯದ ವಿವರಗಳು**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು & ಒಳನಾಡು ಜಲಸಾರಿಗೆ ಇಲಾಖೆ, ರಾಣೇಬೆನ್ನೂರು, ಉಪವಿಭಾಗಕ್ಕೆ ಸಂಬಂಧಿಸಿದಂತೆ 2007–08ನೇ ಸಾಲಿನ ಅನುದಾನ ಮತ್ತು ವೆಚ್ಚವನ್ನು ತೋರಿಸುವ ತಃಖ್ತೆ (ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಲೆಕ್ಕ ಶೀರ್ಷಿಕೆ | 2007–08 | |
|---|---|---|---|
| | | ಅನುದಾನ | ವೆಚ್ಚ |
| 1. | 4059 ಲೋ.ಇ. ಕಾಮಗಾರಿ | 9.46 | 9.46 |
| 2. | 4202 ಶಿಕ್ಷಣ | 10.15 | 10.15 |
| 3. | 4216 ಗೃಹ ನಿರ್ಮಾಣ | 4.27 | 4.27 |
| 4. | 5054 (ಯೋಜನೆ) | 25.00 | 6.02 |
| 5. | 5054 ರಸ್ತೆ ಮತ್ತು ಸೇತುವೆ (ಸಿ.ಆರ್.ಎಫ್) | 1.52 | 1.52 |
| 6. | 5054 ನಬಾರ್ಡ್ ರಸ್ತೆ ಕಾಮಗಾರಿ | 141.00 | 19.68 |
| 7. | 5054 ನಬಾರ್ಡ್ ಸೇತುವೆ ಕಾಮಗಾರಿ | 36.00 | 9.65 |
| 8. | 8443 ಠೇವಣಿ ವಂತಿಕೆ ಕಾಮಗಾರಿ | 96.50 | 48.39 |
| 9. | 3054 (ಯೋಜನೆ) | 100.47 | 100.02 |
| 10. | 2059 (ಯೋಜನೇತರ) | 7.22 | 7.22 |
| 11. | 2216 ಗೃಹ | 1.05 | 1.05 |

**ಕೈಪಿಡಿ: 12)**

ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ.

**ಕೈಪಿಡಿ: 13)**

ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯಿತಿ ಪಡೆಯುವವರ ವಿವರ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು & ಒಳನಾಡು ಜಲಸಾರಿಗೆ ಇಲಾಖೆ, ರಾಣೆಬೆನ್ನೂರು, ಉಪವಿಭಾಗದ ವ್ಯಾಪ್ತಿಯಲ್ಲಿ ಯಾವುದೇ ಪರ್ಮಿಟ್ ಅಥವಾ ಅಧಿಕಾರ ಪತ್ರಗಳನ್ನು ನೀಡುತ್ತಿಲ್ಲ.

**ಕೈಪಿಡಿ: 14) ಇಲಾಖೆಯಲ್ಲಿ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನೀಡಿರುವ ಬಗ್ಗೆ ವಿವರ**

ಇಲಾಖೆಯಲ್ಲಿ ವೆಬ್ ಸೈಟ್ ಯಾವುದೂ ಇಲ್ಲ.

**ಕೈಪಿಡಿ: 15)**

**ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು & ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ, ರಾಣೇಬೆನ್ನೂರು ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಬಿ.ಎಸ್.ಪಾಟೀಲ, ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

ಕಛೇರಿಯ ಸಮಯದ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ ದೂರವಾಣಿ ಸಂಖ್ಯೆ:08373–266666 ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

**ಕೈಪಿಡಿ: 16)**

**ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ವಿವರಗಳು, ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಪದನಾಮ**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು & ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ, ರಾಣೇಬೆನ್ನೂರು ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ಬಿ.ಎಸ್. ಪಾಟೀಲ, ಸಹಾಯಕ ಇಂಜನೀಯರ ಇವರಿಗೆ ಅರ್ಜಿ ನೀಡುವುದು ಅಥವಾ ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು.

| ಕ್ರಮ ಸಂ. | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ನೀಡುವ ಅಧಿಕಾರಿ [ಸೆಕ್ಷನ್–5(1)] | ಸಾರ್ವಜನಿಕ ಮಾಹಿತಿ ನೀಡುವ ಸಹಾಯಕ ಅಧಿಕಾರಿ [ಸೆಕ್ಷನ್–5(2)] | ಮೇಲ್ಮನವಿ ಪ್ರಾಧಿಕಾರ ಅಧಿಕಾರಿಗಳು [ಸೆಕ್ಷನ್–19(1)] |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು & ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ, ರಾಣೇಬೆನ್ನೂರು. | ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು & ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ, ರಾಣೇಬೆನ್ನೂರು. | ಸಹಾಯಕ ಇಂಜನೀಯರ ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು & ಒಳನಾಡು ಜಲಸಾರಿಗೆ ಇಲಾಖೆ, ಉಪವಿಭಾಗ, ಕಛೇರಿ, ರಾಣೇಬೆನ್ನೂರು. | ಕಾರ್ಯನಿರ್ವಾಹಕ ಇಂಜನೀಯರ, ಲೋಕೋಪಯೋಗಿ, ಬಂದರು & ಒಳನಾಡು ಜಲಸಾರಿಗೆ ಇಲಾಖೆ, ವಿಭಾಗ, ಹಾವೇರಿ. |

**ಕೈಪಿಡಿ: 17)**

ಇತರೆ ವಿವರಗಳು

ಏನೂ ಇರುವುದಿಲ್ಲ.

ಮಾಹಿತಿಯನ್ನು ನಿಯಮದಡಿ ಪರಿಶೀಲಿಸಿ ವರದಿಯನ್ನು ತಯಾರಿಸಿ ಸಲ್ಲಿಸಲಾಗಿದೆ.

**ಬಿ.ಎಸ್. ಪಾಟೀಲ**

ಸಹಾಯಕ ಕಾರ್ಯನಿರ್ವಾಹಕ ಇಂಜನೀಯರರು,

ಪಿ.ಆರ್.164 ಲೋಕೋಪಯೋಗಿ, ಬಂದರು & ಒಳನಾಡು

ಜಲಸಾರಿಗೆ ಇಲಾಖೆ, ಉಪವಿಭಾಗ, ರಾಣೇಬೆನ್ನೂರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3: ಅಮೊ:ವಾಹನ–06/07–08, ದಿನಾಂಕ:23ನೇ ಫೆಬ್ರವರಿ, 2008**

**ಉಪಸ್ಥಿತರು:** ಶ್ರೀ ಜಿ. ಜಯರಾಮಯ್ಯ ಭಾ.ಅ.ಸೇ.,

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ.

**ಆರೋಪಿಗಳು:** ಪತ್ತೆಯಾಗಿರುವುದಿಲ್ಲ.

**ಭಾದ್ಯತೆದಾರರು:** ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ:09.08.2007ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಅಂಜನಾಪುರ ಹೋಬಳಿ ಸಾಲೂರು ಗ್ರಾಮ ಶಿಕಾರಿಪುರದಿಂದ ಆನಂದಪುರಕ್ಕೆ ಹೋಗುವ ಪಿಡಬ್ಲ್ಯೂಡಿ ರಸ್ತೆ ಕಣಸೋಗಿಯ ಹತ್ತಿರ ಗಸ್ತು ಮಾಡುತ್ತಿರುವಾಗ ಎದುರಿನಿಂದ ಬಿಳಿ ಬಣ್ಣದ ಮಾರುತಿ ವ್ಯಾನ್ ಬರುತ್ತಿರುವುದನ್ನು ತಪಾಸಣೆಗಾಗಿ ನಿಲ್ಲಿಸಲು ಸೂಚನೆ ನೀಡಿದರೂ ವಾಹನವನ್ನು ನಿಲ್ಲಿಸದೇ ಮುಂದೆ ವೇಗವಾಗಿ ಚಲಿಸಿದಾಗ ಇಲಾಖಾ ವಾಹನ ಕೆಎ–14–ಜಿ–463 ರಲ್ಲಿ ಬೆನ್ನಟ್ಟಿದಾಗ ಮಾರುತಿವ್ಯಾನ್ ಚಾಲಕ ಚಾಲನೆ ಸ್ಥಿತಿಯಲ್ಲಿ ವಾಹನ ಬಿಟ್ಟು ಕೈಗೆ ಸಿಗದೆ ಪರಾರಿಯಾಗಿರುತ್ತಾನೆ. ಈ ವಾಹನವು ಕೆಸರಿನಲ್ಲಿ ಹೂತು ನಿಂತಿದ್ದ ಜಾಗಕ್ಕೆ ಪಂಚಾಯ್ತಿದಾರರನ್ನು ಬರಮಾಡಿಕೊಂಡು ವಾಹನವನ್ನು ಪರಿಶೀಲಿಸಲಾಗಿ ಕೆಎ–15–ಎಂ–1275, ಛಾಸ್ಸಿಸ್ ನಂಬರ್:ST-91-IN-164365, ಇಂಜಿನ್ ನಂಬರ್ ಕಂಡುಬಂದಿರುವುದಿಲ್ಲ. ಮುಂಭಾಗದ ಬಾಗಿಲನ್ನು ತೆರೆದು ಒಳಗೆ ನೋಡಿದಾಗ ಬೀಟೆ ನಾಟಾ 03=0.468ಎಂ3 ಇದ್ದು, ಈ ಬೀಟೆನಾಟಾವು ಹಸಿಯಾಗಿದ್ದು ಇವುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತು ಇರಲಿಲ್ಲ. ಹಾಗೂ ಈ ನಾಟಾಗಳನ್ನು ಸಾಗಿಸಲು ರಹದಾರಿ ಇಲ್ಲವಾದ್ದರಿಂದ ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿವರದಿಯೊಂದಿಗೆ ಇಲಾಖಾ ಪರ ಜಪ್ತಿಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 50ಕೆ, 80, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅರಣ್ಯ ಸಂಚಾರಿದಳ, ಶಿಕಾರಿಪುರದ ಅರಣ್ಯ ಮೊಕದ್ದಮೆ ಸಂಖ್ಯೆ: 39/07–08ನ್ನು ದಾಖಲಿಸಿ, ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–06/07–08 ದಿನಾಂಕ:14.08.2007ರಂದು ಮತ್ತು ದಿನಾಂಕ:26.12.2007ರಂದು ಪತ್ರ ಬರೆದು ಕೋರಲಾಗಿತ್ತು. ಆದರೆ ಇಲ್ಲಿಯವರೆವಿಗೂ ಸಾರಿಗೆ ಅಧಿಕಾರಿ ಈ ವಾಹನದ ಬಿ ಪ್ರತಿ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಮಾಲೀಕರು ಯಾರೆಂದು ತಿಳಿದು ಬಂದಿರದ ಕಾರಣ ಈ ನ್ಯಾಯಾಲಯದಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ಕಾರಣ ಕೇಳಿ ಪತ್ರ ಜಾರಿ ಮಾಡಿರುವುದಿಲ್ಲ. ಒಂದು ವೇಳೆ ಆರ್.ಸಿ. ಮಾಲೀಕರು ಈ ವಿಚಾರದಲ್ಲಿ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದಲ್ಲಿ ಅದಕ್ಕೆ ಸಾಗರದ ಪ್ರಾದೇಶಿಕ ಸಾರಿಗೆ ಅಧಿಕಾರಿಯೆ ನೇರ ಹೊಣೆಗಾರರಾಗುತ್ತಾರೆ.

ಅಲ್ಲದೇ ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಸಂಖ್ಯೆ: ಬಿ3: ಅಮೊ: ವಾಹನ–06/07–08 ದಿನಾಂಕ:14.08.2007ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಣೆಯನ್ನು ಪ್ರಕಟಿಸಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಕೋರಲಾಗಿಯು,

ಅದರಂತೆ ಈ ಪ್ರಕಟಣೆಯು ದಿನಾಂಕ:16.08.2007ರಂದು ಕರ್ನಾಟಕ ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಪ್ರಕಟನೆ ಪ್ರಕಟಗೊಂಡು 30 ದಿನಗಳಾದರೂ ಯಾರೂ ಆರ್.ಸಿ. ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣವನ್ನು ಮುಂದಿನ ಕ್ರಮಕ್ಕೆ ತೆಗೆದುಕೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:02.02.2008ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ತುಂಡುಗಳನ್ನು ಸಾಗಿಸಿದ ಬಗ್ಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ವಾಹನವನ್ನು ಜಪ್ತು ಮಾಡಿ ಮಹಜರ್ ವರದಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ತುಂಡುಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರು ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಬೀಟೆ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿನ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ದಿನಾಂಕ:16.08.2007ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಆರ್.ಸಿ. ಮಾಲೀಕರು ಈ ವಾಹನ ಬಿಟ್ಟುಕೊಡುವಂತೆ ತಮ್ಮ ಹಕ್ಕು ಭಾದ್ಯತೆಯ ಅರ್ಜಿ ಸಲ್ಲಿಸದಿರುವುದರಿಂದ ಹಾಗೂ ಆರ್.ಟಿ.ಓ. ರವರು ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಇದರಿಂದ ಆರ್.ಸಿ. ಮಾಲೀಕರಿಗೆ ಈ ನ್ಯಾಯಾಲಯದಿಂದ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ನೋಟಿಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರಿ ಅಭಿಯೋಜಕರ ವಾದವನ್ನು ಕೇಳಿ ಈ ವಾಹನವನ್ನು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಈವರೆಗಿನ ತಿದ್ದುಪಡಿಗಳ ಅನುಸಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಕೆಎ–15–ಎಂ–1275, ಛಾಸ್ಸಿಸ್ ನಂಬರ್: ST-91-IN-164365 ಹಾಗೂ ಈ ವಾಹನದಲ್ಲಿದ್ದ ಬೀಟೆ ತುಂಡುಗಳು 3=0.468ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:23.02.2008 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾದ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.261

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3: ಅಮೊ:ವಾಹನ–05/07–08, ದಿನಾಂಕ:23ನೇ ಫೆಬ್ರವರಿ, 2008**

**ಉಪಸ್ಥಿತರು:** ಶ್ರೀ ಜಿ. ಜಯರಾಮಯ್ಯ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ.

**ಆರೋಪಿಗಳು:** ತಪ್ಪಿಸಿಕೊಂಡವರು:

1) ವಸಂತ ಬಿನ್ ಹುಚ್ಚರಾಯಪ್ಪ, 40 ವರ್ಷ, ಜೈನ್ ಮಂದಿರ ರಸ್ತೆ, ಶಿರಾಳಕೊಪ್ಪ.
2) ಸೋಮಶೇಖರ್ ಬಿನ್ ಬಸವಲಿಂಗಪ್ಪ, 35 ವರ್ಷ, ಬೆಲವಂತನಕೊಪ್ಪ.
3) ಖಲೀಲ ಬಿನ್ ಶಬ್ಬೀರ್, 20 ವರ್ಷ, ಕೆಳಗಿನಕೇರಿ, ಶಿರಾಳಕೊಪ್ಪ.

**ಭಾದ್ಯತೆದಾರರು:** ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ:28.06.2007ರಂದು ಶಿರಾಳಕೊಪ್ಪ ವಲಯದ ಶಿರಾಳಕೊಪ್ಪ ನಗರ ತನಿಖೆ ವನಪಾಲಕರು ಹಾಗೂ ಸಿಬ್ಬಂದಿಯವರು ರಾತ್ರಿ ಗಸ್ತು ಮಾಡುತ್ತಿರುವಾಗ ಚಿಕ್ಕಸವಿ ಗ್ರಾಮದ ಹತ್ತಿರ ಪಿಡಬ್ಲ್ಯೂಡಿ ರಸ್ತೆಯ ಕವಡಿಯ ಕಟ್ಟೆಯಿಂದ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ನಿಲ್ಲಿಸದೇ ವೇಗವಾಗಿ ಚಲಿಸಿದಾಗ ಇಲಾಖಾ ವಾಹನ ಕೆಎ–14–ಜಿ–488ರಲ್ಲಿ ಬೆನ್ನಟ್ಟಿದಾಗ ವಾಹನದಲ್ಲಿದ್ದ ಒಂದು ತುಂಡುಗಳನ್ನು ಕೆಳಗೆ ಹಾಕಿ ಹಿಂದಿನಿಂದ ಬರುವ ಇಲಾಖಾ ವಾಹನಕ್ಕೆ ಅಡ್ಡಿ ಮಾಡಿದರು. ಕೆಳಗೆ ಹಾಕಿದ ತುಂಡುಗಳನ್ನು ಇಲಾಖಾ ಜೀಪಿನಲ್ಲಿ ಹಾಕಿಕೊಂಡು ಬೆನ್ನಟ್ಟಿ ಸಿಗ್ಗ–ಇಂಡುವಳ್ಳಿ ಕ್ರಾಸ್ ನಂತರ ರಸ್ತೆ ಅಗಲವಿದ್ದರಿಂದ ಸದರಿ ವಾಹನವನ್ನು ಹಿಂದಕ್ಕೆ ಹಾಕಿ ಅಡ್ಡ ನಿಲ್ಲಿಸಲಾಗಿ ವಾಹನದಲ್ಲಿ 3 ಜನ ಅಸಾಮಿಗಳು ವಾಹನದಿಂದ ಇಳಿದು ಓಡಿಹೋಗಿ ತಪ್ಪಿಸಿಕೊಂಡಿರುತ್ತಾರೆ. ಒಂದನೇ ಅಸಾಮಿ ವಸಂತ ಬಿನ್ ಹುಚ್ಚರಾಯಪ್ಪ, 40 ವರ್ಷ, ಜೈನ್ ಮಂದಿರ ರಸ್ತೆ, ಶಿರಾಳಕೊಪ್ಪ, ಎರಡನೇ ಅಸಾಮಿ ಸೋಮಶೇಖರ್ ಬಿನ್ ಬಸವಲಿಂಗಪ್ಪ, 35 ವರ್ಷ, ಬೆಲವಂತನಕೊಪ್ಪ, ಮೂರನೇ ಖಲೀಲ ಬಿನ್ ಶಬ್ಬಿರ್, 20 ವರ್ಷ, ಕೆಳಗಿನಕೇರಿ, ಶಿರಾಳಕೊಪ್ಪ ಎಂದು ವನಪಾಲಕರು ಜೀಪಿನ ಬೆಳಕಿನಲ್ಲಿ ಗುರುತಿಸಿದರು. ನಂತರ ಇಲಾಖೆಯವರನ್ನು ಪಂಚರನ್ನಾಗಿ ನೇಮಿಸಿಕೊಂಡು ಮೆಟಾಡಾರ್ ವ್ಯಾನ್ ಎಫ್–307 ನೀಲಿಬಣ್ಣದ್ದಾಗಿದ್ದು, ಹಿಂದುಗಡೆ ಕ್ಯಾಬಿನ್‌ನನ್ನು ನೀಲಿ ಬಣ್ಣದ ಪ್ಲಾಸ್ಟಿಕ್ ಟಾರ್‌ಪಲ್‌ನಿಂದ ಕಟ್ಟಲಾಗಿತ್ತು. ಬಾಡಿಯ ಒಳಗಡೆ 4 ಬೀಟೆ ತುಂಡುಗಳಿದ್ದು ರಸ್ತೆಯಲ್ಲಿ ಬಿಸಾಡಿದ ಜೀಪಿನಲ್ಲಿ ಇಟ್ಟುಕೊಂಡಿದ್ದ 4 ಬೀಟೆ ತುಂಡುಗಳು ಒಟ್ಟು ಬೀಟೆ ತುಂಡು 8=0.253ಎಂ3 ಇದ್ದು ಬೀಟೆ ತುಂಡುಗಳ ತುದಿ, ಬಿಡ, ಗರಗಸದಿಂದ ಕೊಯ್ತ ಮಾಡಿದ್ದಾಗಿತ್ತು. ಈ ಬೀಟೆ ತುಂಡುಗಳಿಗೆ ಇಲಾಖಾ ಛಾಪಾವಿರಲಿಲ್ಲ ಮತ್ತು ಸಾಗಾಣಿಕೆಗೆ ರಹದಾರಿ ಇರಲಿಲ್ಲವಾದ್ದರಿಂದ ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ ಕೆಎ–30–64ನ್ನು ಮತ್ತು ಬೀಟೆ ನಾಟಾ 8=0.253ಎಂ3 ನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿವರದಿಯೊಂದಿಗೆ ಇಲಾಖಾ ಪರ ಜಪ್ತಿಮಾಡಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 163, 165ರ ಪ್ರಕಾರ ಶಿರಾಳಕೊಪ್ಪ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:34/07–08ನ್ನು ದಾಖಲಿಸಿ, ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ಈ ವಾಹನದ ಆರ್.ಸಿ. ಮಾಲೀಕರ ಹೆಸರು ವಿಳಾಸ ಪಡೆಯಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರಿಗೆ ಈ ನ್ಯಾಯಾಲಯದಿಂದ ಪತ್ರಸಂಖ್ಯೆ: ಬಿ3: ಅಮೊ:ವಾಹನ–05/07–08 ದಿನಾಂಕ:07.07.2007ರಂದು ಪತ್ರ ಬರೆದು ಈ ವಾಹನದ ಬಿ ಪ್ರತಿ ಒದಗಿಸಲು ಕೋರಲಾಗಿತ್ತು. ನ್ಯಾಯಾಲಯದ ಕೋರಿಕೆಯಂತೆ ಈ ವಾಹನದ ಕ್ಲಿಯರೆನ್ಸ್ ಸರ್ಟಿಫಿಕೇಟ್‌ನ್ನು ದಿನಾಂಕ:22.03.1997ರಲ್ಲಿ ಪ್ರಾದೇಶಿಕ ಸಾರಿಗೆ ಕಛೇರಿ, ಶಿವಮೊಗ್ಗಕ್ಕೆ ನೀಡಿದ ಬಗ್ಗೆ ಪತ್ರ ಸಂಖ್ಯೆ: ಪ್ರಾಸಾಅ:ನೋ:ಉ.ಕ–351/07–08 ದಿನಾಂಕ:21.07.2007ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ ಕಾರವಾರ ಪ್ರಾದೇಶಿಕ ಸಾರಿಗೆ ಅಧಿಕಾರಿ ತಿಳಿಸಿದರು. ಇವರು ತಿಳಿಸಿದಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗರವರಿಗೆ ಈ ವಾಹನದ ಆರ್.ಸಿ. ಮಾಲೀಕರು ಯಾರು ಎನ್ನುವ ಬಗ್ಗೆ ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಈ ನ್ಯಾಯಾಲಯದ ಪತ್ರಸಂಖ್ಯೆ: ಬಿ3: ಅಮೊ:ವಾಹನ–5/07–08 ದಿನಾಂಕ:14.08.2007 ಮತ್ತು 26.12.2007ರಲ್ಲಿ ಪತ್ರ ಬರೆಯಲಾಯಿತು. ಆದರೆ ಅವರು ಈ ವಾಹನದ ಬಿ ಪ್ರತಿಯನ್ನು ಇಲ್ಲಿಯವರೆವಿಗೂ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಮಾಲೀಕರು ಯಾರೆಂದು ತಿಳಿದುಬಂದಿರದ ಕಾರಣ ಈ ನ್ಯಾಯಾಲಯದಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ಕಾರಣ ಕೇಳಿ ಪತ್ರ ಜಾರಿ ಮಾಡಿರುವುದಿಲ್ಲ. ಒಂದು ವೇಳೆ ಆರ್.ಸಿ. ಮಾಲೀಕರು ಈ ವಿಚಾರದಲ್ಲಿ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದಲ್ಲಿ ಅದಕ್ಕೆ ಶಿವಮೊಗ್ಗದ ಪ್ರಾದೇಶಿಕ ಸಾರಿಗೆ ಅಧಿಕಾರಿಯೆ ನೇರ ಹೊಣೆಗಾರರಾಗುತ್ತಾರೆ.

ಅಲ್ಲದೇ ಈ ನಡುವೆ ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಸಂಖ್ಯೆ: ಬಿ3: ಅಮೊ:ವಾಹನ–06/07–08 ದಿನಾಂಕ:14.08.2007ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಣೆಯನ್ನು ಪ್ರಕಟಿಸಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಕೋರಲಾಗಿಯು. ಅದರಂತೆ ಈ ಪ್ರಕಟಣೆಯು ದಿನಾಂಕ:16.08.2007ರಂದು ಕರ್ನಾಟಕ ರಾಜ್ಯಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಪ್ರಕಟಣೆ ಪ್ರಕಟಗೊಂಡು 30 ದಿನಗಳಾದರೂ ಯಾರೂ ಆರ್.ಸಿ. ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣವನ್ನು ಮುಂದಿನ ಕ್ರಮಕ್ಕೆ ತೆಗೆದುಕೊಳ್ಳಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:02.02.2008ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ತುಂಡುಗಳನ್ನು ಸಾಗಿಸಿದ ಬಗ್ಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ವಾಹನವನ್ನು ಜಪ್ತು ಮಾಡಿ ಮಹಜರ್ ವರದಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ

ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ತುಂಡುಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಬೀಟೆ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿನ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ದಿನಾಂಕ:16.08.2007ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಆರ್.ಸಿ. ಮಾಲೀಕರು ಈ ವಾಹನ ಬಿಟ್ಟುಕೊಡುವಂತೆ ತಮ್ಮ ಹಕ್ಕು ಭಾಧ್ಯತೆಯ ಅರ್ಜಿ ಸಲ್ಲಿಸದಿರುವುದರಿಂದ ಹಾಗೂ ಸರ್ಕಾರಿ ಅಭಿಯೋಜಕರ ವಾದವನ್ನು ಕೇಳಿ ಈ ವಾಹನವನ್ನು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಈವರೆಗಿನ ತಿದ್ದುಪಡಿಗಳ ಅನುಸಾರ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ, ಇವರು ಜಪ್ತು ಮಾಡಿದ ವಾಹನ ಮೆಟಾಡಾರ್ ವ್ಯಾನ್ ವಾಹನ ಕೆಎ–30–64 ಹಾಗೂ ಈ ವಾಹನದಲ್ಲಿದ್ದ ಬೀಟೆ ತುಂಡು 8=0.253ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:23.02.2008 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.262 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸ್ಥಗಿತಗೊಂಡಿರುವ ಡಿ.ಆರ್.ಎಂ. ಕಾಲೇಜ್ ನೌಕರರ ಸಹಕಾರ ಸಂಘ ನಿ., ದಾವಣಗೆರೆ ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ:31.01.2008.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರ/ ಕಾರ್ಯದರ್ಶಿಯವರ ಮಾಹಿತಿ ಲಭ್ಯವಿರುವುದಿಲ್ಲ ಹಾಗೂ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನ ವರದಿಗಳು ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ, ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ.ಡಿಆರ್/ ಡಿವಿಜಿ/ ಎಲ್‌ಕ್ಯೂಡಿ/ ಸಿಆರ್–17/ 2007–08, ದಿನಾಂಕ:22ನೇ ಫೆಬ್ರವರಿ, 2008**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಶ್ರೀ ಡಿ.ಆರ್.ಎಂ. ಕಾಲೇಜ್ ನೌಕರರ ಸಹಕಾರ ಸಂಘ ನಿ., ದಾವಣಗೆರೆ ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ ದಾವಣಗೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:22.02.2008ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.258

**ಆಯುಷ್ ನಿರ್ದೇಶನಾಲಯದ ನಡವಳಿಗಳು**

**ವಿಷಯ:** ಡಾ: ವೆಂಕಟೇಶಮಯ್ಯ, ವೈದ್ಯರು ದರ್ಜೆ-2, ಸ.ಆ.ಚಿ. ಶೀತಕಲ್ಲು, ತುಮಕೂರು ಜಿಲ್ಲೆ ಇವರ ಮೇಲೆ ಶಿಸ್ತು ಕ್ರಮ ತೆಗೆದುಕೊಳ್ಳುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ: ಆಕುಕ/ 502/ ಪಿಐಎಂ/2007, ದಿನಾಂಕ:04.10.2007.
2) ದೋಷಾರೋಪಣೆ ತಿಳುವಳಿಕೆ ಪತ್ರ ಸಂಖ್ಯೆ: ಆಯುಷ್/ 40/ಸಿ(4)/07-08, ದಿನಾಂಕ:16.11.2007.
3) ದೋಷಾರೋಪಣೆಗೆ ಡಾ: ವೆಂಕಟೇಶಮಯ್ಯ ಅವರ ಲಿಖಿತ ಉತ್ತರ ದಿನಾಂಕ:10.12.2007 & 09.01.2008.

**ಪ್ರಸ್ತಾವನೆ:**

ಓದಲಾದ (2) ರಲ್ಲಿ ಡಾ: ವೆಂಕಟೇಶಮಯ್ಯ, ವೈದ್ಯರು ದರ್ಜೆ-2, ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಶೀತಕಲ್ಲು, ತುಮಕೂರು ತಾ: ಮತ್ತು ಜಿಲ್ಲೆ ಮತ್ತು ಪ್ರಭಾರೆ ವೈದ್ಯರಾಗಿ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಹಿರೇಹಳ್ಳಿ, ತುಮಕೂರು ತಾ: ಮತ್ತು ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಇವರು ದಿನಾಂಕ:09.08.2007ರಂದು ಕರ್ತವ್ಯದ ಸಮಯಕ್ಕೆ ಹಾಜರಾಗದೆ ಗೈರುಹಾಜರಾಗಿರುವುದು ಕಂಡು ಬಂದ ಬಗ್ಗೆ ಅಲ್ಲದೆ ಸದರಿ ಚಿಕಿತ್ಸಾಲಯದಲ್ಲಿ ಪರಿಶೀಲಿಸಲಾಗಿ ಸಾಕಷ್ಟು ಪ್ರಮಾಣದಲ್ಲಿ ಆಯುರ್ವೇದ ಔಷಧಿಗಳು ದಾಸ್ತಾನಿನಲ್ಲಿದ್ದರೂ ಸಹ ಅಲೋಪತಿ ಔಷಧಿಗಳನ್ನು ರೋಗಿಗಳ ಚಿಕಿತ್ಸೆಗೆ ಬಳಸುತ್ತಿರುವುದು ನಿರ್ದೇಶಕರು ತಪಾಸಣೆಗೆ ತೆರಳಿದಾಗ ಕಂಡುಬಂದಿರುತ್ತದೆ.

ಇವರು ಹೆಚ್ಚುವರಿ ಪ್ರಭಾರೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಹಿರೇಹಳ್ಳಿ, ತುಮಕೂರು ತಾ: ಮತ್ತು ಜಿಲ್ಲೆ ಇಲ್ಲಿಯೂ ಸಹ ರೋಗಿಗಳ ಚಿಕಿತ್ಸೆಗಾಗಿ ಅಲೋಪತಿ ಔಷಧಿಗಳನ್ನು ಬಳಸುತ್ತಿರುವುದು ತಪಾಸಣೆ ಸಮಯದಲ್ಲಿ ಕಂಡುಬಂದಿದ್ದು, ಸ್ವತಃ ಇವರಿಂದ ಅಲೋಪತಿ ಔಷಧಿಗಳ ಪಟ್ಟಿಯನ್ನು ಮಾಡಿಸಿ ಸಹಿ ಪಡೆಯಲಾಗಿತ್ತು.

ಇವರು ಕರ್ತವ್ಯ ನಿರ್ವಹಿಸುತ್ತಿರುವ ಎರಡೂ ಆಯುರ್ವೇದ ಚಿಕಿತ್ಸಾಲಯಗಳಾದ ಶೀತಕಲ್ಲು ಮತ್ತು ಹಿರೇಹಳ್ಳಿಗಳಲ್ಲಿ ಆಯುರ್ವೇದ ಔಷಧಗಳು ಸಾಕಷ್ಟು ಪ್ರಮಾಣದಲ್ಲಿದ್ದರೂ ಅಲೋಪತಿ ಔಷಧಿಗಳನ್ನು ಬಳಸುತ್ತಿರುವುದು ಅಲ್ಲದೆ, ಈ ಎರಡೂ ಚಿಕಿತ್ಸಾಲಯಗಳಿಗೂ ಚಿಕಿತ್ಸೆಗಾಗಿ ಬಂದಿದ್ದ ರೋಗಿಗಳನ್ನು ವಿಚಾರಿಸಲಾಗಿ ರೂ.5/- ರಿಂದ 10/- ಗಳನ್ನು ಪಡೆದು ಚುಚ್ಚುಮದ್ದು ನೀಡುತ್ತಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದರಿಂದ ದೋಷಾರೋಪಣೆ ಪಟ್ಟಿ ತಯಾರಿಸಿ ಲಿಖಿತ ಹೇಳಿಕೆ ನೀಡಲು ನಿರ್ದೇಶನ ನೀಡಲಾಗಿತ್ತು.

ಆರೋಪಿತ ಅಧಿಕಾರಿಯು ದಿನಾಂಕ:10.12.2007ರ ಲಿಖಿತ ಹೇಳಿಕೆಯಲ್ಲಿ ಎಲ್ಲಾ ದೋಷಾರೋಪಣೆಗಳನ್ನು ಅಲ್ಲಗಳೆಯಲಾಗಿತ್ತು. ಪುನಃ ದಿನಾಂಕ:09.01.2008ರ ಲಿಖಿತ ಹೇಳಿಕೆ ನೀಡಿ ನಿರ್ದೇಶಕರು ಅನಿರೀಕ್ಷಿತ ಭೇಟಿ ಕೊಟ್ಟ ಸಂದರ್ಭದಲ್ಲಿ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಶೀತಕಲ್ಲು ಮತ್ತು ಹಿರೇಹಳ್ಳಿಗಳಲ್ಲಿ ಕೆಲವೊಂದು ಅಲೋಪತಿ ಔಷಧಗಳು ಇದ್ದುದಾಗಿಯೂ, ಇವುಗಳನ್ನು ಬಡಜನರ ಅನುಕೂಲಕ್ಕಾಗಿ ಉಪಯೋಗಿಸಲಾಗಿತ್ತೆಂದು, ಇನ್ನು ಮುಂದೆ ಚಿಕಿತ್ಸಾಲಯದಲ್ಲಿ ಯಾವುದೇ ಅಲೋಪತಿ ಔಷಧಗಳನ್ನು ಬಳಸುವುದಿಲ್ಲವೆಂದು ತಿಳಿಸುತ್ತಾ, ಎರಡೂ ಸ್ಥಳಗಳಲ್ಲಿ ಪ್ರಭಾರದಲ್ಲಿದ್ದುದರಿಂದ ಒಂದು ಸ್ಥಳದಲ್ಲಿ ಅನಿರೀಕ್ಷಿತ ಭೇಟಿ ಸಮಯದಲ್ಲಿ ಕರ್ತವ್ಯದಲ್ಲಿದ್ದು, ಇನ್ನೊಂದು ಸ್ಥಳದಲ್ಲಿ ಇರಲು ಸಾಧ್ಯವಿಲ್ಲವೆಂದು ಈ ಮೂಲಕ ತಿಳಿಸಬಯಸುತ್ತೇನೆಂದು ಹಾಗೂ ರೋಗಿಗಳಿಂದ ರೂ.5/- ಅಥವಾ 10/- ಗಳನ್ನು ನಾನಾಗಿ ಅವರಿಂದ ಪಡೆದಿರುವುದಿಲ್ಲವೆಂದು ಕೆಲವೊಮ್ಮೆ ರೋಗಿಗಳೇ ಸ್ವಯಂಪ್ರೇರಣೆಯಿಂದ ಬೇಡವೆಂದರೂ ಕೊಟ್ಟು ಹೋಗಿರುತ್ತಾರೆಂದು ಹಾಗೂ ಇನ್ನು ಮುಂದೆ ಚಿಕಿತ್ಸಾಲಯದಲ್ಲಿ ಯಾವುದೇ ಅಲೋಪತಿ ಔಷಧ ಬಳಸುವುದಿಲ್ಲವೆಂದು, ಕ್ಷಮಿಸಬೇಕೆಂದು ಲಿಖಿತ ಹೇಳಿಕೆ ನೀಡಿರುತ್ತಾರಲ್ಲದೆ ದೋಷಾರೋಪಣೆಗಳನ್ನು ಒಪ್ಪಿಕೊಂಡಿರುತ್ತಾರೆ.

ಆರೋಪಿತ ಅಧಿಕಾರಿಯು ದೋಷಾರೋಪಣೆಗಳನ್ನು ಒಪ್ಪಿಕೊಂಡಿರುವುದರಿಂದ ಹೇಳಿಕೆಯನ್ನು ಪರಿಗಣಿಸಿ, ಕನಾ.ಸೇ. (ಸಿ.ಸಿ.ಎ.) ನಿಯಮ 1957ರ ನಿಯಮ 9(ಸಿ) ರಲ್ಲಿ ಪ್ರದತ್ತವಾದ ಶಿಸ್ತು ಪ್ರಾಧಿಕಾರಿಯಾದ ನಾನು ಸದರಿ ನಿಯಮಾವಳಿಗಳ ನಿಯಮ 8(II) ರನ್ವಯ ಸೆನ್‌ಸೂರ್ (Censur) ಎಂಬ ದಂಡನೆ ವಿಧಿಸಲು ಪರಿಗಣಿಸಿದೆ.

**ಆದೇಶ ಸಂಖ್ಯೆ: ಆಯುಷ್/ 40/ ಸಿಬ್ಬಂದಿ(4)/2007-08, ದಿನಾಂಕ:21ನೇ ಫೆಬ್ರವರಿ, 2008**

ಡಾ: ವೆಂಕಟೇಶಮಯ್ಯ, ವೈದ್ಯರು ದರ್ಜೆ-2, ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ಶೀತಕಲ್ಲು, ತುಮಕೂರು ತಾ: ಮತ್ತು ಜಿಲ್ಲೆ ಇವರು ದೋಷಾರೋಪಣೆಗಳನ್ನು ಒಪ್ಪಿಕೊಂಡಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮ 1957ರ ನಿಯಮ 9(ಸಿ) ರಲ್ಲಿ ಪ್ರದತ್ತವಾದ ಅಧಿಕಾರಿಯಾದ ನಾನು, ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮ 1957ರ ನಿಯಮ 8(II) ರನ್ವಯ ವಾಗ್ದಂಡನೆ (Censur) ಎಂಬ ದಂಡನೆ ವಿಧಿಸಿದೆ.

ನಿರ್ದೇಶಕರು,
ಆಯುರ್ವೇದ, ಯೋಗ ಮತ್ತು
ನ್ಯಾಚುರೋಪತಿ ಯುನಾನಿ ಸಿದ್ಧ ಮತ್ತು
ಹೋಮಿಯೋಪತಿ (ಆಯುಷ್) ಇಲಾಖೆ,
ಧನ್ವಂತರಿ ರಸ್ತೆ, ಬೆಂಗಳೂರು-560 009.

ಪಿ.ಆರ್.259

**ಉಪನಿರ್ದೇಶಕರವರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಅಧಿಕೃತ ಜ್ಞಾಪನ**
**ಸಂಖ್ಯೆ: ಆ3. ದೂರು.ಅ.ಗೈ.ಹಾ.79/99–2000, ದಿನಾಂಕ:13ನೇ ಮಾರ್ಚ್, 2008**

**ವಿಷಯ:** ಶ್ರೀ ಎಸ್. ಸೋಮನಾಥ್, ಸಹ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹೊಸ ಕಡ್ಲೆಬಾಳು, ದಾವಣಗೆರೆ (ಉ) ವಲಯ ಇವರ ಅನಧೀಕೃತ ಗೈರುಹಾಜರಿ ಬಗ್ಗೆ.

**ಉಲ್ಲೇಖ:** 1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ದಾವಣಗೆರೆ(ಉ) ವಲಯ ರವರ ಪತ್ರಸಂಖ್ಯೆ:ಇ6.ಪ್ರಾಶಿಅಗೈಹಾ 62/1999–2000 ದಿನಾಂಕ:16.11.1999 ಹಾಗೂ ದಿನಾಂಕ:02.02.2000.

2) ಈ ಕಛೇರಿಯ ಕಾರಣ ಕೇಳಿನೋಟೀಸ್ ಪತ್ರ ಸಮ ಸಂಖ್ಯೆ: ದಿನಾಂಕ:18.05.2000.

3) ಕ್ಷೇತ್ರ ಶಿಕ್ಷಣಾಧಿಕಾರಿಗಳು, ದಾವಣಗೆರೆ (ಉ) ವಲಯ ರವರ ಪತ್ರಸಂಖ್ಯೆ:ಸಿ6 ಪ್ರಾಶಾಶಿಅಗೈಹಾ 62/2000 ದಿನಾಂಕ:08.08.2001.

4) ಕ್ಷೇತ್ರ ಶಿಕ್ಷಣಾಧಿಕಾರಿಗಳು, ದಾವಣಗೆರೆ (ಉ) ವಲಯ ರವರ ಪತ್ರಸಂಖ್ಯೆ: ಸಿ6 ಪ್ರಾಶಾಶಿಅಗೈಹಾ 62/99–2000 ದಿನಾಂಕ:14.09.2001.

5) ಕ್ಷೇತ್ರ ಶಿಕ್ಷಣಾಧಿಕಾರಿಗಳು, ದಾವಣಗೆರೆ (ಉ) ವಲಯ ರವರ ಪತ್ರಸಂಖ್ಯೆ: ಸಿ6 ಪ್ರಾಶಾಶಿಅಗೈಹಾ 62/99–2000 ದಿನಾಂಕ:28.11.2001.

6) ದಿನಾಂಕ:24.02.2008ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಹೊರಡಿಸಿದ ಪ್ರಕಟಣೆ ಮೇರೆಗೆ.

**ಪ್ರಸ್ತಾವನೆ:**

ಶ್ರೀ ಎಸ್. ಸೋಮನಾಥ, ಸಹ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹೊಸ ಕಡ್ಲೆಬಾಳು, ದಾವಣಗೆರೆ (ಉ) ವಲಯ ಆದ ಇವರು ದಿನಾಂಕ:10.10.1999 ರಿಂದ ಶಾಲಾ ಮುಖ್ಯೋಪಾಧ್ಯಾಯರಿಗಾಗಲೀ, ಕ್ಷೇತ್ರ, ಶಿಕ್ಷಣಾಧಿಕಾರಿಗಳ ಕಛೇರಿಗಳ ಕಛೇರಿಗಾಗಲೀ ಯಾವುದೇ ರಜೆ ಅರ್ಜಿ ಸಲ್ಲಿಸದೇ ಹಾಗೂ ಯಾವುದೇ ಮಾಹಿತಿಯನ್ನು ನೀಡದೇ ಕರ್ತವ್ಯದಿಂದ ಅನಧೀಕೃತ ಗೈರುಹಾಜರಾಗಿರುತ್ತಾರೆ. ಈ ಬಗ್ಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಗೆ 03.11.1999 ರಂದು ಅಲ್ಲಿನ ಗ್ರಾಮಸ್ಥರು ದೂರವಾಣಿ ಮುಖಾಂತರ ಸದರಿ ನೌಕರರು ಅನಧಿಕೃತ ಗೈರುಹಾಜರಾಗಿರುವುದಾಗಿ ತಿಳಿಸಿದ್ದರ ಮೇರೆಗೆ ಸಂಬಂಧಿಸಿದ ಮುಖ್ಯೋಪಾಧ್ಯಾಯರಿಗೆ ಮಾಹಿತಿ ಸಲ್ಲಿಸುವಂತೆ ಸೂಚಿಸಿದ್ದರ ಮೇರೆಗೆ ದಿನಾಂಕ:12.11.1999 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಗೆ ಸದರಿ ನೌಕರರು ದಿನಾಂಕ:10.10.1999 ರಿಂದ ಗೈರುಹಾಜರಾಗಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ನೌಕರರಿಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕರ್ತವ್ಯದ ಮೇಲೆ ಹಾಜರಾಗುವಂತೆ ಸೂಚಿಸಿ ದಿನಾಂಕ:31.12.1999 ರಂದು ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ತಿಳುವಳಿಕೆ ಪತ್ರವನ್ನು ಸದರಿ ನೌಕರರ ಸೇವಾ ವಹಿಯಲ್ಲಿರುವ ವಿಳಾಸಕ್ಕೆ ಕಳುಹಿಸಿದ್ದರೂ ಸಹ ಸದರಿ ನೌಕರರು ವಿಳಾಸದಲ್ಲಿ ಇರುವುದಿಲ್ಲವೆಂದು ನೋಟೀಸ್ ಬಂದಿರುವುದಾಗಿ ಇವರ ಮೇಲೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸೇ.ಇ.ವಿ. 1999 ದಿನಾಂಕ:01.12.1999 ರನ್ವಯ ಶಿಸ್ತು ಕ್ರಮ ಕೈಗೊಳ್ಳುವಂತೆ ಉಲ್ಲೇಖ (1)ರ ಪತ್ರಗಳಲ್ಲಿ ವರದಿ ಮಾಡಿರುತ್ತಾರೆ. ಸದರಿ ಶಿಫಾರಸ್ಸಿನ ಮೇರೆಗೆ ಸದರಿಯವರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಉಲ್ಲೇಖ (2)ರಲ್ಲಿ ಈ ಕಛೇರಿಯಿಂದ ಕರ್ತವ್ಯಕ್ಕೆ ಹಾಜರಾಗುವಂತೆ ಹಾಗೂ ಗೈರುಹಾಜರಿಗೆ ಕಾರಣ ಕೇಳಿ ನೋಟೀಸನ್ನು ಜಾರಿಗೊಳಿಸಲು ಕ್ಷೇತ್ರ ಶಿಕ್ಷಣಾಧಿಕಾರಿಗಳ ಮುಖಾಂತರ ಕಳುಹಿಸಲಾಗಿತ್ತು. ಆದರೆ ಸದರಿ ನೌಕರರು ಸಂಬಂಧಿಸಿದ ವಿಳಾಸದಲ್ಲಿ ಮತ್ತೂ ಸಹ ಲಭ್ಯವಿರುವುದಿಲ್ಲವೆಂದು ಉಲ್ಲೇಖ (3)ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ವರದಿ ಮಾಡಿರುತ್ತಾರೆ.

ಸದರಿ ನೌಕರರು ಕರ್ತವ್ಯಕ್ಕೆ ಅನಧೀಕೃತ ಗೈರುಹಾಜರಾಗಿರುವ ಹಿನ್ನೆಲೆಯಲ್ಲಿ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರನ್ವಯ ಶಿಸ್ತುಕ್ರಮ ತೆಗೆದುಕೊಳ್ಳಲು ಉದ್ದೇಶಿಸಿ ನಿಯಮ 11(4)ರಡಿ ದೋಷಾರೋಪಣ ಪಟ್ಟಿ ಅನುಬಂಧ 1 ರಿಂದ 4ನ್ನು ಜಾರಿಗೊಳಿಸಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮುಖಾಂತರ ಸಂಬಂಧಿಸಿದ ಶಿಕ್ಷಕರಿಗೆ ತಲುಪಿಸಲು ಕ್ರಮ ಕೈಗೊಳ್ಳಲಾಯಿತು ಆದರೆ ಸದರಿ ನೌಕರರು ಅವರು ನೀಡಿರುವ ವಿಳಾಸದಲ್ಲಿ ಹಾಗೂ ಸದರಿ ಗ್ರಾಮದಲ್ಲಿಯೂ ಸಹ 10.10.1999 ರಿಂದಲೇ ಇರುವುದಿಲ್ಲವೆಂದು ತಿಳಿಸಿರುವುದಾಗಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಉಲ್ಲೇಖ (5)ರಲ್ಲಿ ವರದಿ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ನೌಕರರಿಗೆ ಅಂತಿಮ ಅವಕಾಶ ನೀಡುವ ಸಂಬಂಧವಾಗಿ ಉಲ್ಲೇಖ (6)ರನ್ವಯ ರಾಜ್ಯದಾದ್ಯಂತ ಪ್ರಸಾರವಿರುವ ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ 15 ದಿನದೊಳಗಾಗಿ ಕರ್ತವ್ಯದ ಮೇಲೆ ಹಾಜರಾಗುವಂತೆ ಸೂಚಿಸಿ ಪ್ರಕಟಣೆಯನ್ನು ನೀಡಲಾಯಿತು. ಇದಕ್ಕೂ ಸಹ ಸದರಿ ನೌಕರರಿಂದ ಅಥವಾ ಅವರ ಕುಟುಂಬದವರಿಂದ ಯಾವುದೇ ರೀತಿಯ ಮಾಹಿತಿಯಾಗಲೀ ಮತ್ತು ಖುದ್ದಾಗಿಯಾಗಲೀ ಈ ಕಛೇರಿಗೆ ಹಾಜರಾಗಿ ಸಲ್ಲಿಸಿರುವುದಿಲ್ಲ. ಪ್ರಯುಕ್ತ ಸದರಿ ನೌಕರರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು ಈ ರೀತಿ ಅನಧೀಕೃತ ಗೈರುಹಾಜರಾಗುವುದರೊಂದಿಗೆ ಶಾಲಾ ಶೈಕ್ಷಣಿಕ ಪ್ರಗತಿಗೆ ಹಿನ್ನಡೆಯುಂಟು ಮಾಡುವುದರೊಂದಿಗೆ ಬೇಜವಬ್ದಾರಿತನದಿಂದ ವರ್ತಿಸಿ ತಾವು ಕರ್ತವ್ಯದ ಮೇಲೆ ಮುಂದುವರೆಯಲು ಇಚ್ಛೆ ಇಲ್ಲವೆಂಬುದನ್ನು ಪರೋಕ್ಷವಾಗಿ ಪ್ರಾಧಿಕಾರಕ್ಕೆ ಮನವರಿಕೆ ಮಾಡಿರುತ್ತಾರೆ.

ಈ ಎಲ್ಲಾ ಹಿನ್ನೆಲೆಯಲ್ಲಿ ಸದರಿ ನೌಕರರ ನಡವಳಿಕೆಗಳು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3ಕ್ಕೆ ವಿರುದ್ಧವಾಗಿರುವುದು ದೃಢಪಟ್ಟಿರುವುದರಿಂದ ಸದರಿ ನೌಕರರನ್ನು ಕರ್ತವ್ಯದಿಂದ ವಜಾಗೊಳಿಸುವ ಸಂಬಂಧ ಈ ಕೆಳಗಿನ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಸಿ.ಯು.ಚಂದ್ರಶೇಖರ, ಶಿಸ್ತು ಪ್ರಾಧಿಕಾರಿ ಮತ್ತು ಉಪನಿರ್ದೇಶಕ (ಆಡಳಿತ) ಆದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 7ರಲ್ಲಿ ಹಾಗೂ ನಿಯಮ 9ರಲ್ಲಿನ ['ಗ' ಮತ್ತು 'ಪ' ನಲ್ಲಿನ] ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 108ರ ರೀತ್ಯಾ ಶ್ರೀ ಎಸ್. ಸೋಮನಾಥ, ಸಹ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹೊಸಕಡ್ಲೆಬಾಳು, ದಾವಣಗೆರೆ (ಉ) ವಲಯ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿದೆ.

**ಸಿ.ಯು. ಚಂದ್ರಶೇಖರ**
ಶಿಸ್ತುಪ್ರಾಧಿಕಾರಿ ಹಾಗೂ ಉಪನಿರ್ದೇಶಕ (ಆಡಳಿತ).

ಪಿ.ಆರ್.363

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** 2007ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಲ್ಲಿ ಶ್ರೀಯುತರಾದ ಸೂರೆಕಾಂತ, ರಾಘವೇಂದ್ರ ಬಿ ಗಾಯಕವಾಡ್ ತಾರಾಬಾಯಿ ಬಸಯ್ಯ ಸಿದ್ರಾಮಯ್ಯ, ಈರೇಶ್ ಇವರುಗಳು ಎಸಗಿದ ದುರಾಚಾರ ಪ್ರಕರಣದ ದಂಡನೆ ವಿಧಿಸುವ ಆದೇಶ.

**ಓದಲಾಗಿದೆ:**(1) ಸೂರೆಕಾಂತ ನೋಂದಣಿ ಸಂಖ್ಯೆ: 70187, ರಾಘವೇಂದ್ರ ಬಿ ಗಾಯಕವಾಡ್ ನೋಂದಣಿ ಸಂಖ್ಯೆ:70420, ತಾರಾಬಾಯಿ, ನೋಂದಣಿ ಸಂಖ್ಯೆ:70438, ಬಸಯ್ಯ ಸಿದ್ರಾಮಯ್ಯ, ನೋಂದಣಿ ಸಂಖ್ಯೆ:69056 ಹಾಗೂ ಈರೇಶ್, ನೋಂದಣಿ ಸಂಖ್ಯೆ:69878, ಗುಲ್ಬರ್ಗಾ ಕೇಂದ್ರ ಅರ್ಜಿ ಸಲ್ಲಿಸಿದ ದಿನಾಂಕಗಳು:30.08.2007, 31.08.2007, 03.09.2007, 10.09.2007.

(2) ನೋಟೀಸ್ ಸಂಖ್ಯೆ: ಆರ್‌ಎಚ್‌ಎಸ್:299/ 07–08/ ಪಿಎಸ್‌ಸಿ, ದಿನಾಂಕ:22.01.2008.

(3) ಶ್ರೀಯುತರ ಸಮಜಾಯಿಷಿ ದಿನಾಂಕಗಳು 29.01.2008, 30.01.2008.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗ ನಡೆಸಿದ 2007ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ದಿನಾಂಕ:24.11.2007 ಮತ್ತು 25.11.2007ರಲ್ಲಿ ಈ ಕೆಳಕಂಡ ಅಭ್ಯರ್ಥಿಗಳು ಈ ಕೆಳಗಿನ ಪರೀಕ್ಷಾ ಕೇಂದ್ರಗಳಲ್ಲಿ ದುರಾಚಾರವೆಸಗಿರುವ ಬಗ್ಗೆ ಶ್ರೀಕಾಶಿನಾಥ ಗೋಕಳೆ, ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ ಹಾಗೂ ಪರೀಕ್ಷಾ ವೀಕ್ಷಕರು, ಗುಲ್ಬರ್ಗಾ, ಇವರು ವರದಿ ಸಲ್ಲಿಸಿದ್ದು ವರದಿಯಲ್ಲಿ ಅಭ್ಯರ್ಥಿಗಳು ಪರೀಕ್ಷಾ ಕೊಠಡಿಯಲ್ಲಿ ಮಾತನಾಡುತ್ತಿದ್ದು ಪರೀಕ್ಷಾ ಕಾರ್ಯಗಳಿಗೆ ಭಂಗ ಉಂಟು ಮಾಡಿರುವುದರಿಂದ ಉಲ್ಲೇಖ (2)ರಲ್ಲಿ ಓದಲಾದ ವರದಿಯ ಹಿನ್ನೇಲೆಯಲ್ಲಿ ಉಲ್ಲೇಖ (3) ರಲ್ಲಿ ಓದಲಾದ ದಿನಾಂಕ:22.01.2008ರಲ್ಲಿ ಅಭ್ಯರ್ಥಿಗಳಿಗೆ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿಗಳನ್ನು ಕೇಳಲಾಗಿತ್ತು. (1) ಶ್ರೀ ಸೂರೆಕಾಂತ, ನೋ.ಸಂ.70187, ಆಶಾ ಜ್ಯೋತಿ ಡಿ.ಎಡ್. ಕಾಲೇಜು, ವಿರೇಂದ್ರ ಪಾಟೀಲ್ ಬಡಾವಣೆ, ಯೂನಿರ್ವಸಿಟಿ ರಸ್ತೆ, ಗುಲ್ಬರ್ಗಾ, (2) ಶ್ರೀ ಬಸಯ್ಯ ಸಿದ್ರಾಮಯ್ಯ, ನೋ.ಸಂ:69056, ಆಶಾ ಜ್ಯೋತಿ ಡಿ.ಎಡ್. ಕಾಲೇಜು, ವಿರೇಂದ್ರ ಪಾಟೀಲ್ ಬಡಾವಣೆ, ಯೂನಿರ್ವಸಿಟಿ ರಸ್ತೆ, ಗುಲ್ಬರ್ಗಾ, (3) ಶ್ರೀ ರಾಘವೇಂದ್ರ ಬಿ ಗಾಯಕವಾಡ್, ನೋ.ಸಂ.70420, ಸರ್ಕಾರಿ ಶಿಕ್ಷಕಿಯರ ತರಬೇತಿ ಸಂಸ್ಥೆ, ದರ್ಗಾರೋಡ್, ಗುಲ್ಬರ್ಗಾ, (4) ಶ್ರೀಮತಿ ತಾರಾಬಾಯಿ ನೋ.ಸಂ.70468, ಸರ್ಕಾರಿ ಶಿಕ್ಷಕಿಯರ ತರಬೇತಿ ಸಂಸ್ಥೆ, ದರ್ಗಾರೋಡ್, ಗುಲ್ಬರ್ಗಾ, (5) ಶ್ರೀ ಈರೇಶ್, ನೋ.ಸಂ.69878, ಸರ್ಕಾರಿ ಶಿಕ್ಷಕಿಯರ ತರಬೇತಿ ಸಂಸ್ಥೆ, ದರ್ಗಾರೋಡ್, ಗುಲ್ಬರ್ಗಾ, ಸದರಿ ನೋಟೀಸ್‌ಗಳಿಗೆ ಉತ್ತರವಾಗಿ ಆಪಾದಿತರು ದಿನಾಂಕ:29.01.2008, 30.01.2008ರ ಸಮಜಾಯಿಷಿಗಳಲ್ಲಿ ಆರೋಪವನ್ನು ಒಪ್ಪಿಕೊಂಡಿರುವುದರಿಂದ ಹಾಗೂ ಪ್ರಕರಣಕ್ಕೆ ಸಂಬಂಧಿಸಿದಂತೆ ಓದಲಾದ ದಾಖಲೆ ಸಾಕ್ಷ್ಯ ಇತ್ಯಾದಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ದಿನಾಂಕ:14.07.1993ರ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93–94/ ಪಿಎಸ್‌ಸಿ ಅನ್ವಯ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(1) 1249–57/ 07–08/ ಪಿಎಸ್‌ಸಿ ಬೆಂಗಳೂರು, ದಿನಾಂಕ:27ನೇ ಮಾರ್ಚ್, 2008**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಾವಳಿ ನಿಯಮ 11 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಆಡಳಿತ:398/ 93–94/ಪಿಎಸ್‌ಸಿ ದಿನಾಂಕ:14.07.1993 ಅಧಿಸೂಚನೆಯಂತೆ, ಸದರಿ ಇಲಾಖಾ ಪರೀಕ್ಷೆಗಳಿಗೆ ಅಭ್ಯರ್ಥಿಗಳಾದ ಶ್ರೀ ಸೂರೆಕಾಂತ, ನೋಂದಣಿ ಸಂಖ್ಯೆ:70187, ಸಹಶಿಕ್ಷಕರು, ಸರ್ಕಾರಿ ಪದವಿ ಪೂರ್ವಕಾಲೇಜ್ ಮುಧೋಳ, ಸೇಡಂ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ–585318, ಶ್ರೀ ರಾಘವೇಂದ್ರ ಬಿ ಗಾಯಕವಾಡ್, ನೋಂದಣಿ ಸಂಖ್ಯೆ:70420, ಫಾರೆಸ್ಟ್ ಗಾರ್ಡ್, ರೇಂಜ್ ಫಾರೆಸ್ಟ್ ಆಫೀಸ್, ಚಿಂಚೋಳಿ ರೇಂಜ್, ಚಿಂಚೋಳಿ, ಗುಲ್ಬರ್ಗಾ ಜಿಲ್ಲೆ, ಶ್ರೀಮತಿ ತಾರಾಬಾಯಿ, ನೋಂದಣಿ ಸಂಖ್ಯೆ:70438, W/o ಹನುಮಂತರಾವ್, ಅಡುಗೆ ಕೆಲಸಗಾರರು, ಸಮಾಜ ಕಲ್ಯಾಣ ಇಲಾಖೆ, ಸೇಡಂ (ತಾ), ಗುಲ್ಬರ್ಗಾ ಜಿಲ್ಲೆ–585222, ಶ್ರೀ ಬಸಯ್ಯ ಸಿದ್ರಾಮಯ್ಯ, ನೋಂದಣಿ ಸಂಖ್ಯೆ:69056, ಸಹಶಿಕ್ಷಕರು, ಸರ್ಕಾರಿ ಬಾಲಕಿಯರ ಪ್ರೌಢಶಾಲೆ, ಹುಣಸಗಿ, ಶೋರಾಪುರ (ತಾ), ಗುಲ್ಬರ್ಗಾ ಜಿಲ್ಲೆ–585215, ಶ್ರೀ ಈರೇಶ್, ನೋಂದಣಿ ಸಂಖ್ಯೆ:69878, ಗ್ರಾಮಲೆಕ್ಕಿಗ, ತಹಸೀಲ್ದಾರ್ ಆಫೀಸ್ ಚಿತ್ತಾಪುರ, ಗುಲ್ಬರ್ಗಾ ಜಿಲ್ಲೆ–585211, ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದರಿಂದ 2007ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ

**ಹೆಚ್.ಬಿ. ಚನ್ನರಾಜು**

ಪಿ.ಆರ್.364

ಕಾರ್ಯದರ್ಶಿ ಹಾಗೂ ನಿಯಂತ್ರಕರು (ಪ್ರ),
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** 2007ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಬಿ. ಬಸವರಾಜ್ ಪ್ರಥಮ ದರ್ಜೆ ಸಹಾಯಕರು, ಶ್ರೀಮತಿ ಕೆ.ಎಸ್. ನಾಗರತ್ನಮ್ಮ ದಲಾಯತ್ ಇವರು ಎಸಗಿದ ದುರಾಚಾರ ಪ್ರಕರಣದ ದಂಡನೆ ವಿಧಿಸುವ ಆದೇಶ.

**ಓದಲಾಗಿದೆ:**(1) ಶ್ರೀ ಬಿ. ಬಸವರಾಜ್ ಪ್ರಥಮ ದರ್ಜೆ ಸಹಾಯಕರು, ಜಿಲ್ಲಾ ಸರ್ಕಾರಿ ಮುದ್ರಣಾಲಯ ಶಿವಮೊಗ್ಗ.

(2) ಶ್ರೀಮತಿ ನಾಗರತ್ನಮ್ಮ ಕೆ.ಎಸ್. ದಲಾಯತ್ ಕೇಂದ್ರ ಸರ್ಕಾರಿ ಮುದ್ರಣಾಲಯ, ಪೀಣ್ಯ, 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು–56.

(3) ನೋಟೀಸ್ ಸಂಖ್ಯೆ: ಆರ್‌ಹೆಚ್‌ಎಸ್:282/2007–2008, ದಿನಾಂಕ:22.01.2008.

(4) ಶ್ರೀಯುತರ ಸಮಜಾಯಿಷಿ ದಿನಾಂಕ:29.01.2008.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗ ನಡೆಸಿದ 2007ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಪ್ರೆಸ್ ಅಂಡ್ ಅಲೈಡ್ ಆಫೀಸ್ ಮ್ಯಾನ್ಯಯಲ್ ಹೈಯರ್ ಪತ್ರಿಕೆ–2 ಪ್ರೆಸ್ ಅಂಡ್ ಅಲೈಡ್ ಆಫೀಸ್ ಮ್ಯಾನ್ಯಯಲ್ ಲೋಯರ್ ಪತ್ರಿಕೆ–2ರ ಉತ್ತರಪತ್ರಿಕೆಯಲ್ಲಿ ಹೆಸರನ್ನು ನೋಂದಾಯಿಸಿರುವುದರಿಂದ ಉಲ್ಲೇಖ (3)ರಲ್ಲಿ ಓದಲಾದ ದಿನಾಂಕ:29.01.2008ರಲ್ಲಿ ಶ್ರೀಮತಿ ಕೆ.ಎಸ್. ನಾಗರತ್ನಮ್ಮ, ಶ್ರೀ ಬಿ.ಬಸವರಾಜ ಸಮಜಾಯಿಷಿ ಕೇಳಲಾಗಿತ್ತು. ಸದರಿ ನೋಟೀಸಿಗೆ ಉತ್ತರವಾಗಿ ಮೊದಲ ಬಾರಿಗೆ ಪರೀಕ್ಷೆ ತೆಗೆದುಕೊಂಡಿದ್ದು ಈ ಬಗ್ಗೆ ತಿಳುವಳಿಕೆ ಇಲ್ಲದೆ ಹೆಸರನ್ನು ನೋಂದಾಯಿಸಲಾಗಿದೆ ಎಂದು ಒಪ್ಪಿಕೊಂಡಿರುವುದರಿಂದ ಪರೀಕ್ಷೆ ಸೂಚನೆಗಳನ್ನು ಉಲ್ಲಂಘನೆಯಾಗಿದ್ದು ದಾಖಲೆ ಸಾಕ್ಷ್ಯ ಇತ್ಯಾದಿಗಳನ್ನು ಪರಿಶೀಲಿಸಿ ದಿನಾಂಕ:14.07.1993ರ ಅಧಿಕೃತ ಜ್ಞಾಪನ ಆಡಳಿತ ಸಂಖ್ಯೆ:398/93–94/ ಪಿಎಸ್‌ಸಿ ಅನ್ವಯ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(1) 1241/ 07–08/ ಪಿಎಸ್‌ಸಿ ಬೆಂಗಳೂರು, ದಿನಾಂಕ:20ನೇ ಮಾರ್ಚ್, 2008**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಾವಳಿ ನಿಯಮ 11 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಆಡಳಿತ:398/ 93–94/ಪಿಎಸ್‌ಸಿ ದಿನಾಂಕ:14.07.1993 ಅಧಿಸೂಚನೆಯಂತೆ, ಸದರಿ ಇಲಾಖಾ ಪರೀಕ್ಷೆಗಳಿಗೆ ಅಭ್ಯರ್ಥಿಗಳಾದ ಶ್ರೀ ಬಿ.ಬಸವರಾಜ ನೋ.ಸಂ.84009, ಶ್ರೀಮತಿ ಕೆ.ಎಸ್. ನಾಗರತ್ನಮ್ಮ ನೋ.ಸಂ.53936 ಇವರ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿರುವುದರಿಂದ ಇವರುಗಳಿಗೆ 2007ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ
**ಹೆಚ್.ವಿ. ಪಾರ್ಶ್ವನಾಥ**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.365

## ಜಿಲ್ಲಾ ಪಂಚಾಯತಿ ಉಪನಿರ್ದೇಶಕರ ಕಛೇರಿ ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕಮಗಳೂರು

### ಜ್ಞಾಪನ

**ಸಂಖ್ಯೆ:ಇ6:ಸಾಶಿಇ:ದೂರು:49:2004–2005, ದಿನಾಂಕ:13ನೇ ಮಾರ್ಚ್, 2008**

**ವಿಷಯ:** ಶ್ರೀಮತಿ ಎ.ಎಂ. ದಾಕ್ಷಾಯಿಣಿ, ಸಹಶಿಕ್ಷಕಿ, ಸ.ಹಿ.ಪ್ರಾ.ಶಾಲೆ, ಮೇಗರಮಕ್ಕಿ, ನ.ರಾ.ಪುರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಇವರ ಗೈರು ಹಾಜರಿಯ ಬಗ್ಗೆ– ಶಿಸ್ತು ಕ್ರಮಜರುಗಿಸುವ ಕುರಿತು.

**ಉಲ್ಲೇಖ:**1) ಕ್ಷೇತ್ರ ಶಿಕ್ಷಣಾಧಿಕಾರಿಗಳು ನ.ರಾ.ಪುರ ಇವರ ಪತ್ರ ಸಂಖ್ಯೆ:ಎ2:ಸಾಶಿಇ:ರಜೆ:2003–2004 ದಿನಾಂಕ: 13.02.2004 ಮತ್ತು ದಿನಾಂಕ:15.07.2004.

2) ಈ ಕಛೇರಿಯ ಪತ್ರ ಸಮಸಂಖ್ಯೆ: ದಿನಾಂಕ:31.08.2004 ಮತ್ತು ದಿನಾಂಕ:06.11.2004.

3) ಕ್ಷೇತ್ರ ಶಿಕ್ಷಣಾಧಿಕಾರಿಗಳು ನ.ರಾ.ಪುರ ಇವರ ಪತ್ರ ಸಂಖ್ಯೆ:ಎ2:ಸಾಶಿಇ:ರಜೆ:2003–2004 ದಿನಾಂಕ:12.01.2005.

4) ಈ ಕಛೇರಿಯ ಪತ್ರ ಸಮಸಂಖ್ಯೆ: ದಿನಾಂಕ:17.02.2005.

5) ಕ್ಷೇತ್ರ ಶಿಕ್ಷಣಾಧಿಕಾರಿಗಳು ನ.ರಾ.ಪುರ ಇವರ ಪತ್ರಸಂಖ್ಯೆ: ಎ2: ಸಾಶಿಇ: ಗೈಹಾ:749: 2003–2004 ದಿನಾಂಕ:28.02.2005.

6) ಈ ಕಛೇರಿಯ ಪತ್ರ ಸಮ ಸಂಖ್ಯೆ: ದಿನಾಂಕ:28.03.2005.

7) ಕ್ಷೇತ್ರ ಶಿಕ್ಷಣಾಧಿಕಾರಿಗಳು ನ.ರಾ.ಪುರ ಇವರ ಪತ್ರ ಸಂಖ್ಯೆ:ಎ2:ಸಾಶಿಇ:ರಜೆ:2003–2004 ದಿನಾಂಕ:26.03.2005, ದಿನಾಂಕ:26.03.2005, ದಿನಾಂಕ:11.04.2005, ದಿನಾಂಕ:18.05.2005 ಮತ್ತು ದಿನಾಂಕ:22.09.2005.
8) ಆರೋಪಿತ ಶಿಕ್ಷಕಿಯ ಮನವಿ ಪತ್ರ ದಿನಾಂಕ: ಇಲ್ಲ.
9) ಈ ಕಛೇರಿಯ ಪತ್ರ ಸಮ ಸಂಖ್ಯೆ: ದಿನಾಂಕ:02.06.2005.
10) ಈ ಕಛೇರಿಯ ಪತ್ರ ಸಮ ಸಂಖ್ಯೆ: ದಿನಾಂಕ:05.07.2006.
11) ಕ್ಷೇತ್ರ ಶಿಕ್ಷಣಾಧಿಕಾರಿಗಳು ನ.ರಾ.ಪುರ ಇವರ ಪತ್ರ ಸಂಖ್ಯೆ: ಎ2:ಸಾಶಿಇ: ರಜೆ:2003–2004 ದಿನಾಂಕ:18.08.2006.
12) ಈ ಕಛೇರಿಯ ಪತ್ರ ಸಮ ಸಂಖ್ಯೆ: ದಿನಾಂಕ:25.11.2006.
13) ವಿಚಾರಣಾಧಿಕಾರಿಗಳ ಪತ್ರ ಸಂಖ್ಯೆ: ಸಿ2: ಸಾಶಿಇ: ವಿಚಾರಣೆ ವರದಿ:06–07 ದಿನಾಂಕ:12.04.2007.
14) ಈ ಕಛೇರಿಯ ಪತ್ರ ಸಮ ಸಂಖ್ಯೆ: ದಿನಾಂಕ:21.05.2007.
15) ಕ್ಷೇತ್ರ ಶಿಕ್ಷಣಾಧಿಕಾರಿಗಳು ನ.ರಾ.ಪುರ ಇವರ ಪತ್ರ ಸಂಖ್ಯೆ: ಎ2(ಎ1): ಸಾಶಿಇ: ದಿಗೈಹಾ:2:2003–2004 ದಿನಾಂಕ:31.05.2007.
16) ಆರೋಪಿತ ಶಿಕ್ಷಕಿಯ ಮನವಿ ಪತ್ರ ದಿನಾಂಕ: ಇಲ್ಲ.
17) ಕ್ಷೇತ್ರ ಶಿಕ್ಷಣಾಧಿಕಾರಿಗಳು ನ.ರಾ.ಪುರ ಇವರ ಪತ್ರ ಸಂಖ್ಯೆ:ಎ2(ಎ1): ಸಾಶಿಇ:2003–2004 ದಿನಾಂಕ:22.06.2007.
18) ಈ ಕಛೇರಿಯ ಪತ್ರ ಸಮ ಸಂಖ್ಯೆ: ದಿನಾಂಕ:10.12.2007.
19) ಆರೋಪಿತ ಶಿಕ್ಷಕಿಯ ಮನವಿ ಪತ್ರ ದಿನಾಂಕ: ಇಲ್ಲ
20) ಈ ಕಛೇರಿಯ ಪತ್ರ ಸಮ ಸಂಖ್ಯೆ: ದಿನಾಂಕ:24.01.2008.
21) ಆರೋಪಿತ ಶಿಕ್ಷಕಿಯ ಮನವಿ ಪತ್ರ ದಿನಾಂಕ: ಇಲ್ಲ.
22) ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಆಸುಇ:18ಸೇಇವಿ:2001 ದಿನಾಂಕ:14.09.2001.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖ (1)ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಲಾಯಿತು. ಶ್ರೀಮತಿ ಎ.ಎಂ. ದಾಕ್ಷಾಯಿಣಿ, ಸಹಶಿಕ್ಷಕಿ ಸ.ಹಿ.ಪ್ರಾ. ಶಾಲೆ ಮೇಗರಮಕ್ಕಿ, ನ.ರಾ.ಪುರ ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ ಇವರು ದಿನಾಂಕ:30.10.2003ರ ಪೂರ್ವಾಹ್ನ ಶಾಲಾ ಕರ್ತವ್ಯದ ಮೇಲೆ ಹಾಜರಾಗಿ ದಿನಾಂಕ:03.11.2003 ರಿಂದ ವೈದ್ಯಕೀಯ ಪತ್ರದ ಆಧಾರದ ಮೇಲೆ ಆರೋಗ್ಯ ಸರಿಯಿಲ್ಲವೆಂದು, ಆರೋಗ್ಯ ಸುಧಾರಿಸುವವರೆಗೆ ವೈದ್ಯಕೀಯ ರಜೆ (ವೇತನ ರಹಿತ ರಜೆ) ಕೋರಿ ಈವರೆಗೂ ಹಾಜರಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ.

ಉಲ್ಲೇಖ (2)ರ ಈ ಕಛೇರಿ ಪತ್ರದಂತೆ ಸದರಿ ಶಿಕ್ಷಕಿಗೆ ಶಾಲಾ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ಸೂಚಿಸಲಾಯಿತು. ಉಲ್ಲೇಖ (3)ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ನ.ರಾ.ಪುರ ಇವರು ಸದರಿ ಶಿಕ್ಷಕಿ ಈವರೆಗೂ ಶಾಲಾ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ವರದಿ ಸಲ್ಲಿಸಿದ ಹಿನ್ನೆಲೆಯಲ್ಲಿ ಉಲ್ಲೇಖ (4)ರ ಈ ಕಛೇರಿಯ ಪತ್ರದಂತೆ ಸದರಿ ಶಿಕ್ಷಕಿಗೆ ಶಾಲಾ ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಯಿತು. ಉಲ್ಲೇಖ (5)ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ನ.ರಾ.ಪುರ ಇವರು ಸದರಿ ಶಿಕ್ಷಕಿ ಗೈರು ಹಾಜರಿಯ ಬಗ್ಗೆ ವರದಿ ಸಲ್ಲಿಸಿರುತ್ತಾರೆ. ಉಲ್ಲೇಖ (6)ರ ಈ ಕಛೇರಿಯ ಪತ್ರದಂತೆ ಶಿಕ್ಷಕಿಗೆ ಶಾಲಾ ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಯಿತು. ಉಲ್ಲೇಖ (7)ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ನ.ರಾ.ಪುರ ಇವರು ಸದರಿ ಶಿಕ್ಷಕಿ ಗೈರು ಹಾಜರಿಯ ಬಗ್ಗೆ ವರದಿ ಸಲ್ಲಿಸಿರುತ್ತಾರೆ. ಉಲ್ಲೇಖ (8)ರ ಪತ್ರದಲ್ಲಿ ಆರೋಪಿತ ಸದರಿ ಶಿಕ್ಷಕಿ ಆರೋಗ್ಯ ಸುಧಾರಿಸದ ಕಾರಣದಿಂದ ವಿಶ್ರಾಂತಿಯ ಅವಶ್ಯಕತೆ ಇರುವುದರಿಂದ ವೈದ್ಯಕೀಯ ರಜೆ ಮುಂದುವರಿಸಬೇಕಾಗಿ ಕೋರಿರುತ್ತಾರೆ. ಆದರೆ ಸದರಿ ಶಿಕ್ಷಕಿ ವೈದ್ಯಕೀಯ ಪತ್ರ ನೀಡಿಲ್ಲ ಮನವಿ ಪತ್ರದಲ್ಲಿ ದಿನಾಂಕ ನಮೂದಿಸಿರುವುದಿಲ್ಲ. ಉಲ್ಲೇಖ (9)ರ ಈ ಕಛೇರಿಯ ಪತ್ರದಂತೆ ಶಿಕ್ಷಕಿಯ ಮನವಿ ಪತ್ರವನ್ನು ಪರಿಶೀಲಿಸಿ ಶಾಲಾ ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಯಿತು.

ಸದರಿ ಶಿಕ್ಷಕಿಯು ದಿನಾಂಕ:03.11.2003 ರಿಂದ ಶಾಲಾ ಕರ್ತವ್ಯಕ್ಕೆ ಹಾಜರಾಗದೇ ಅನಗತ್ಯವಾಗಿ ಪತ್ರ ವ್ಯವಹರಿಸಿಕೊಂಡು ವಿದ್ಯಾರ್ಥಿಗಳಿಗೆ ಪಾಠ ಪ್ರವಚನಗಳಿಗೆ ತೊಂದರೆಯುಂಟು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11 ರಡಿಯಲ್ಲಿ ಆರೋಪಪಟ್ಟಿಯನ್ನು ಉಲ್ಲೇಖ (10)ರ ಪತ್ರದಂತೆ ಜಾರಿಗೊಳಿಸಲಾಯಿತು. ಉಲ್ಲೇಖ (11)ರ ಪತ್ರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ನ.ರಾ.ಪುರ ಇವರಿಗೆ ಆರೋಪ ಪಟ್ಟಿಯನ್ನು ಶಿಕ್ಷಕಿಯ ಸ್ವಂತ ವಿಳಾಸಕ್ಕೆ ಕಳುಹಿಸಿಕೊಟ್ಟಿರುವ ಬಗ್ಗೆ ವರದಿ ಸಲ್ಲಿಸಿರುತ್ತಾರೆ. ಸದರಿ ಶಿಕ್ಷಕಿಯು

ಆರೋಪ ಪಟ್ಟಿಗೆ ಲಿಖಿತ ಹೇಳಿಕೆಯನ್ನು ಸಲ್ಲಿಸದೇ ಇರುವುದರಿಂದ ಉಲ್ಲೇಖ (12) ರ ಈ ಕಛೇರಿಯ ಪತ್ರದಂತೆ ಇಲಾಖೆ ವಿಚಾರಣೆ ನಡೆಸಲು ನಿರ್ಧರಿಸಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಕ ಮಾಡಲಾಯಿತು.

ಉಲ್ಲೇಖ (13)ರ ಪತ್ರದಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಿದಾಗ ಸದರಿ ಶಿಕ್ಷಕಿ ದಿನಾಂಕ:03.11.2003 ರಿಂದ ಶಾಲಾ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗಿರುವುದು ದೃಢಪಟ್ಟಿರುತ್ತದೆಂದು ಅಭಿಪ್ರಾಯ ನೀಡಿರುತ್ತಾರೆ.

ಉಲ್ಲೇಖ (14) ಮತ್ತು (15)ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಸದರಿ ಶಿಕ್ಷಕಿಗೆ ಸ್ವಂತ ವಿಳಾಸಕ್ಕೆ ನೀಡಿ ಗೈರು ಹಾಜರಿಯ ಆರೋಪ ಸಾಬೀತಾಗಿರುವ ಬಗ್ಗೆ ಲಿಖಿತ ಹೇಳಿಕೆ ನೀಡಲು ತಿಳಿಸಲಾಯಿತು.

ಉಲ್ಲೇಖ (16)ರ ಪತ್ರದಲ್ಲಿ ಆರೋಪಿತ ಶಿಕ್ಷಕಿ ಆರೋಗ್ಯ ಇನ್ನೂ ಸುಧಾರಿಸದ ಕಾರಣ ಕರ್ತವ್ಯಕ್ಕೆ ಹಾಜರಾಗಲು ಆಗುತ್ತಿಲ್ಲ ಆದ್ದರಿಂದ ರಜೆಯನ್ನು ಮುಂದುವರೆಸಲು ಅಥವಾ ಇಲಾಖೆಯಿಂದ ಅವಕಾಶವಿದ್ದರೆ ಈ ಪತ್ರವನ್ನು ತನ್ನ ರಾಜೀನಾಮೆ ಪತ್ರವೆಂದು ಪರಿಗಣಿಸಲು ಕೋರಿರುತ್ತಾರೆ.

ಉಲ್ಲೇಖ (18)ರ ಈ ಕಛೇರಿಯ ಪತ್ರದಲ್ಲಿ ಸದರಿ ಶಿಕ್ಷಕಿಯ ಮನವಿ ಪತ್ರವನ್ನು ಪರಿಶೀಲಿಸಿ ಸದರಿ ಶಿಕ್ಷಕಿಗೆ ದೀರ್ಘ ಕಾಲ ಗೈರು ಹಾಜರಿಯಿಂದ ಸೇವಾ ಭಂಗ ಮಾಡಿರುವುದು ದೃಢಪಟ್ಟಿರುವುದರಿಂದ ರಜೆಯನ್ನು ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಮುಂದುವರೆಸಲು ಅವಕಾಶ ಇಲ್ಲವೆಂದು ಹಾಗೂ ರಾಜೀನಾಮೆಯನ್ನು ಸ್ವೀಕರಿಸಲು ಯಾವ ದಿನಾಂಕದಿಂದ ರಾಜೀನಾಮೆಯನ್ನು ಸ್ವೀಕರಿಸಬೇಕೆಂಬುದರ ಬಗ್ಗೆ ತಿಳಿಸಲು ಸೂಚಿಸಿ ಶಾಲಾ ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಯಿತು.

ಉಲ್ಲೇಖ (19)ರ ಪತ್ರದಲ್ಲಿ ಆರೋಪಿತ ಶಿಕ್ಷಕಿಯು ವೇತನ ರಹಿತ ರಜೆಯನ್ನು ಮುಂದುವರೆಸಬೇಕೆಂದು ಮನವಿ ಪತ್ರವನ್ನು ಸಲ್ಲಿಸಿರುತ್ತಾರೆ. ಆದರೆ ದಿನಾಂಕ ನಮೂದಿಸಿರುವುದಿಲ್ಲ. ಉಲ್ಲೇಖ (20)ರ ಈ ಕಛೇರಿಯ ಪತ್ರದಲ್ಲಿ ಶಾಲಾ ಕರ್ತವ್ಯಕ್ಕೆ ದಿನಾಂಕ:03.11.2003 ರಿಂದ ಸುಮಾರು 4 ವರ್ಷಗಳಿಂದ ಗೈರು ಹಾಜರಾಗಿರುತ್ತಾರೆ ಇದರಿಂದ ಸೇವಾಭಂಗಗೊಳಿಸಿರುವುದರಿಂದ ವೇತನ ರಹಿತ ರಜೆ ಮಂಜೂರು ಮಾಡಲು ಅವಕಾಶವಿಲ್ಲದಿರುವುದರಿಂದ ಕೊನೆಯ ಬಾರಿಗೆ ಶಾಲಾ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ 108 ರಂತೆ ಕ್ರಮವಹಿಸಲಾಗುವುದೆಂದು ಸದರಿ ಶಿಕ್ಷಕಿಗೆ ತಿಳಿಸಲಾಯಿತು.

ಉಲ್ಲೇಖ (21)ರ ಪತ್ರದಲ್ಲಿ ಸದರಿ ಶಿಕ್ಷಕಿ ದಿನಾಂಕ ನಮೂದಿಸದೇ ಇನ್ನೂ ಸ್ವಲ್ಪ ಸಮಯ ವೈದ್ಯಕೀಯ ರಜೆ ನೀಡಬೇಕೆಂದು ಹಾಗೂ ವೇತನ ರಹಿತ ರಜೆಯನ್ನು ಹಾಕಲು ಅವಕಾಶವಿರುವುದರಿಂದ ವೇತನ ರಹಿತ ರಜೆಯನ್ನು ನೀಡಬೇಕಾಗಿ ಮನವಿ ಪತ್ರವನ್ನು ಸಲ್ಲಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಯಿತು. ಶ್ರೀಮತಿ ಎ.ಎಂ. ದಾಕ್ಷಾಯಿಣಿ, ಸಹಶಿಕ್ಷಕಿ, ಸ.ಹಿ.ಪ್ರಾ.ಶಾಲೆ, ಮೇಗರಮಕ್ಕಿ, ನ.ರಾ.ಪುರ ತಾಲ್ಲೂಕು ಇವರು ದಿನಾಂಕ:03.11.2003 ರಿಂದ ಶಾಲಾ ಕರ್ತವ್ಯಕ್ಕೆ ಇಲ್ಲಿಯವರೆಗೆ ಸುಮಾರು 4 ವರ್ಷಗಳವರೆಗೆ ಹಾಜರಾಗದೇ ವೈದ್ಯಕೀಯ ಪ್ರಮಾಣ ಪತ್ರ ನೀಡದೆ ವೇತನ ರಹಿತ ರಜೆಯನ್ನು ವೈದ್ಯಕೀಯ ನೆಲೆಯಲ್ಲಿ ಇಲಾಖೆಯ ನಿಯಮದಲ್ಲಿ ಅವಕಾಶವಿದ್ದರೆ ಮಂಜೂರು ಮಾಡುವಂತೆ ಕೋರಿರುತ್ತಾರೆ ಅಥವಾ ರಾಜೀನಾಮೆ ಪತ್ರವೆಂದು ತಿಳಿದು ರಾಜೀನಾಮೆಯನ್ನು ಪರಿಗಣಿಸಬೇಕಾಗಿ ಮನವಿ ಪತ್ರವನ್ನು ದಿನಾಂಕ ನಮೂದಿಸದೇ ಸಲ್ಲಿಸಿರುತ್ತಾರೆ. ಸದರಿ ಶಿಕ್ಷಕಿಯು ಶಾಲಾ ಕರ್ತವ್ಯಕ್ಕೆ ಸುಮಾರು 4 ವರ್ಷಗಳಿಂದ ಹಾಜರಾಗದೇ ಸೇವಾ ಭಂಗಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಹಾಗೂ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಮತ್ತು ಸದರಿ ಶಿಕ್ಷಕಿಗೆ ಸರ್ಕಾರಿ ಕೆಲಸ ನಿರ್ವಹಿಸಲು ಆಸಕ್ತಿ ಇಲ್ಲದಿರುವುದರಿಂದ ಅವರ ಮನವಿಯನ್ನು ಪರಿಗಣಿಸಲು ಅವಕಾಶವಿಲ್ಲದಿರುವುದರಿಂದ ಸದರಿ ಶಿಕ್ಷಕಿಯ ವಿರುದ್ಧ ಈ ಕೆಳಕಂಡಂತೆ ಕ್ರಮಜರುಗಿಸಿ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಮಂಟೆಲಿಂಗಾಚಾರಿ, ಉಪನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಉಪನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ VII ರಂತೆ, ಕರ್ನಾಟಕ ನಾಗರೀಕ ಸೇವಾ ನಿಯಮ 108 ರಂತೆ ಹಾಗೂ ಉಲ್ಲೇಖ (22)ರ ಸರ್ಕಾರಿ ಸುತ್ತೋಲೆಯಂತೆ ಶ್ರೀಮತಿ ಎ.ಎಂ. ದಾಕ್ಷಾಯಿಣಿ, ಸಹಶಿಕ್ಷಕಿ, ಸ.ಹಿ.ಪ್ರಾ.ಶಾಲೆ ಮೇಗರಮಕ್ಕಿ, ನ.ರಾ.ಪುರ ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ ಇವರು ದಿನಾಂಕ:03.11.2003 ರಿಂದ ಶಾಲಾ ಕರ್ತವ್ಯಕ್ಕೆ ಈವರೆಗೂ ಹಾಜರಾಗದೇ ಅನಧಿಕೃತ ಗೈರು ಹಾಜರಾಗಿ ಕರ್ತವ್ಯ ಲೋಪ ಎಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) 1966ರ ನಿಯಮ 3ನ್ನು ಉಲ್ಲಂಘಿಸಿರುವುದು ದೃಢಪಟ್ಟಿರುವುದರಿಂದ ಸದರಿ ಶಿಕ್ಷಕಿಯನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿರುತ್ತೇನೆ.

**ಮಂಟೆಲಿಂಗಾಚಾರಿ**

ಪಿ.ಆರ್.341

ಉಪನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು
ಸಾಶಿಇ, ಚಿಕ್ಕಮಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ರವರ ಕಛೇರಿ ನಡುವಳಿಗಳು**

**ಗುನ್ನೆ ನಂ.04/2006-07, ದಿನಾಂಕ:17ನೇ ಆಗಸ್ಟ್ 2007,**

**ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಇಂಡಿ.**

**ನಂ: ಇಎಕ್ಸ್‌ಇ:ಬಿಜೆಪಿ: ಇಐಬಿ:ಡಿಟಿಸಿಆರ್:31/2007-08, ದಿನಾಂಕ:22ನೇ ಫೆಬ್ರವರಿ, 2007**

**ಉಪಸ್ಥಿತರು:** ಕೆ.ಆರ್. ಗೌಡ್ರ

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

| **ಪಿರ್ಯಾಧಿದಾರರು** | | **ಆರೋಪಿತರು** |
|---|---|---|
| ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಇಂಡಿ | **ವಿರುದ್ಧ** | ಇಲ್ಲಾ |

**ವಾಹನದ ಮಾಲೀಕರು**

ಶ್ರೀ ಶಾಂತಪ್ಪಾ ಡಿ. ಕ್ಷತ್ರಿ, ಸಾ:ನಾದ (ಬಿ.ಕೆ.), ತಾ:ಇಂಡಿ, ಜಿ: ಬಿಜಾಪುರ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:17.08.2007ರಂದು ಸಂಜೆ 7-00 ಗಂಟೆಗೆ ಇಂಡಿ ತಾಲ್ಲೂಕು ಜಾರಿ ಮತ್ತು ತನಿಖೆ ಕಛೇರಿಯ ಅಬಕಾರಿ ಉಪ ನಿರೀಕ್ಷಕರು, ಅಬಕಾರಿ ಸಿಬ್ಬಂದಿಯವರು ಇಂಡಿ-ಆಲಮೇಲ ರಸ್ತೆಯಲ್ಲಿರುವ ಖೇಡಗಿ ಕ್ರಾಸ್ ಹತ್ತಿರ ರಸ್ತೆ ಕಾವಲು ಮಾಡುತ್ತಾ ನಿಂತಾಗ ಒಂದು ದ್ವಿಚಕ್ರ ವಾಹನವು ಸಾಲೋಟಗಿ ಗ್ರಾಮ ಕಡೆಯಿಂದ ಬರುತ್ತಿರುವುದನ್ನು ಕಂಡರು. ಕೈ ಸೊನ್ನೆ ಮಾಡಿ ನಿಲ್ಲಿಸಲು ಸೂಚಿಸಿದಾಗ ಸಮವಸ್ತ್ರದಲ್ಲಿದ್ದ ಸಿಬ್ಬಂದಿ ಜನರನ್ನು ಕಂಡು ಆ ವಾಹನ ನಿಲ್ಲದೇ ವೇಗವಾಗಿ ಅಲ್ಲಿಂದ ಪಾರಾಗಿ ಮುಂದೆ ಸಾಗಿತು. ಆಗ ಅಬಕಾರಿ ಅಧಿಕಾರಿಗಳು ಅದನ್ನು ಹಿಡಿಯಲು ಸರ್ಕಾರಿ ವಾಹನ ಸಂಖ್ಯೆ:ಕೆಎ-28-ಜಿ-310 ನೇದ್ದರಲ್ಲಿ ಬೆನ್ನಹತ್ತಿದಾಗ ಸದರಿ ಮೋಟಾರ್ ಸೈಕಲ್ ಸವಾರದಾರನು ಮೋಟಾರ್ ಸೈಕಲ್‌ನ್ನು ರಸ್ತೆ ಬದಿಗೆ ಎಸೆದು ಓಡತೊಡಗಿದನು, ಆಗ ಅವನ್ನು ಹಿಡಿಯಲು ಪ್ರಯತ್ನಿಸಿದಾಗ ಅವನು ಓಡಿ ಹೋಗಿ ಕತ್ತಲಲ್ಲಿ ಪರಾರಿಯಾದನು. ನಂತರ ಅಧಿಕಾರಿಗಳು ವಾಹನ ಬಿದ್ದ ಸ್ಥಳದ ಹತ್ತಿರ ಬಂದಾಗ ಅಲ್ಲಿ ಒಂದು ತಟ್ಟಿನ ಚೀಲ ಬಿದ್ದಿರುವುದನ್ನು ಕಂಡು ಅದನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಓರಿಜಿನಲ್ ಚಾಯಿಸ್ ವ್ಹಿಸ್ಕಿಯ ಮದ್ಯ ತುಂಬಿದ ಬಾಟಲಿಗಳು ಕಂಡು ಬಂದವು ಆಗ ಅಧಿಕಾರಿಗಳು ಘಟನೆ ನಡೆದ ಸ್ಥಳದಲ್ಲಿ ಯಾರು ಜನ ಇಲ್ಲದಿರುವುದರಿಂದ ಅಬಕಾರಿ ರಕ್ಷಕರಲ್ಲಿಯೇ ಇಬ್ಬರನ್ನು ಪಂಚ ಸಾಕ್ಷಿಯಾಗಿ ಪಂಚನಾಮೆ ನಡೆಸಿಕೊಡಲು ಕೇಳಿಕೊಂಡಿರುವುದರಿಂದ ಎರಡು ಜನ ಅಬಕಾರಿ ರಕ್ಷಕರು ಅದಕ್ಕೆ ಒಪ್ಪಿಕೊಂಡಿರುತ್ತಾರೆ. ಅವುಗಳನ್ನು ಎಲ್ಲರ ಸಮಕ್ಷಮ ಎಣಿಕೆ ಮಾಡಿ ನೋಡಲಾಗಿ ಅವುಗಳಲ್ಲಿ 180 ಮಿಲಿಯ 20 ಬಾಟಲಿಗಳು ಒಡೆದು ಹೋಗಿ ಮದ್ಯ ಸೋರಿ ಹೋಗಿರುವುದು ಕಂಡುಬಂದಿತು, ಇನ್ನುಳಿದ 180 ಮಿಲಿಯ 96 ಬಾಟಲಿಗಳು ಚನ್ನಾಗಿರುವುದು ಗೊತ್ತಾಗಿರುತ್ತದೆ. ಸದರಿ 96 ಬಾಟಲಿಗಳಲ್ಲಿ 180 ಮಿಲಿಯ ಒಂದು ಬಾಟಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅದಕ್ಕೆ ಅಧಿಕಾರಿಯ ಮತ್ತು ಪಂಚರ ಸಹಿ ಮಾಡಿದ ಚೀಟಿಗಳನ್ನು ಅಂಟಿಸಿ ಕಛೇರಿಯ ಶೀಲಿನಿಂದ ಶೀಲು ಮಾಡಿರುತ್ತಾರೆ. ಹಾಗೂ ಇನ್ನುಳಿದ ಬಾಟಲಿಗಳನ್ನು ಚೀಲದಲ್ಲಿ ಹಾಕಿ ಬಾಯಿಕಟ್ಟಿ ಶೀಲು ಮಾಡಿರುತ್ತಾರೆ. ನಂತರ ಅಲ್ಲಿಯೇ ಬಿದ್ದಿದ್ದ ಮೋಟಾರ್ ಸೈಕಲನ್ನು ಎತ್ತಿ ನಿಲ್ಲಿಸಿ ಸರ್ಕಾರಿ ವಾಹನದ ಹೆಡ್‌ಲೈಟ್ ಬೆಳಕಿನಲ್ಲಿ ಅದನ್ನು ನೋಡಲಾಗಿ ಅದು ಸುಜುಕಿ ಕಂಪನಿಯ ಹಿಟ್ 125 ಸಿ.ಸಿ. 5 ಸ್ಪೀಡ್ ದ್ವಿಚಕ್ರ ವಾಹನ ಅದರ ಚಾಸ್ಸಿ ನಂ.MBBNF4BAD78126776 ಇರುವುದು ತಿಳಿದುಕೊಂಡು ಸದರಿ ದ್ವಿಚಕ್ರ ಹಾಗೂ ಮುದ್ದೇಮಾಲನ್ನು ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು ತಮ್ಮ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿ ಪಂಚನಾಮೆ ಕ್ರಮ ಜರುಗಿಸಿರುತ್ತಾರೆ. ನಂತರ ಗುನ್ನೆ ನಂ.04/2007-08 ನ್ನು ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ಇಂಡಿಯಲ್ಲಿ ಸರ್ಕಾರಿ ತರ್ಫೆ ಪಿರ್ಯಾಧಿಯನ್ನು ಸಲ್ಲಿಸಿರುತ್ತಾರೆ. ಮುಂದಿನ ಕ್ರಮಕ್ಕಾಗಿ ಪ್ರಥಮ ವರ್ತಮಾನ ವರದಿ ಮತ್ತು ಮಾಲು ಜಪ್ತು ಪಂಚನಾಮೆಯೊಂದಿಗೆ ಈ ಕಛೇರಿಗೆ ವರದಿ ಸಲ್ಲಿಸಿರುತ್ತಾರೆ.

ನಂತರ ಪಿರ್ಯಾಧಿದಾರರು ರಸಾಯನಿಕ ಮಾದರಿಯನ್ನು ರಸಾಯನಿಕ ತಜ್ಞರಿಗೆ ಕಳುಹಿಸಿ ವರದಿ ಪಡೆದಿರುತ್ತಾರೆ. ಸದರಿ ರಸಾಯನಿಕ ತಜ್ಞರ ವರದಿಯಲ್ಲಿ ಜಪ್ತಾದ ಮದ್ಯದಲ್ಲಿ 32.7 ಯು.ಪಿ. ಮದ್ಯಸಾರದ ಅಂಶವಿದ್ದು, ಇದು ನಕಲು ಮದ್ಯವಾಗಿರುತ್ತದೆಂದು ದೃಢಪಡಿಸಿರುತ್ತಾರೆ. ನಂತರ ಶ್ರೀ ಎಸ್.ಎಸ್. ರಬಿನಾಳ ವಕೀಲರು ಇವರು ಸದರಿ ಜಪ್ತಾದ ವಾಹನ ಶಾಂತಪ್ಪ ತಂದೆ ದಶರಥ ಕ್ಷತ್ರಿ ಇವರ ಮಾಲಿಕತ್ವಕ್ಕೆ ಒಳಪಟ್ಟಿದ್ದು, ಸದರಿ ವಾಹನವನ್ನು ತಾತ್ಕಾಲಿಕವಾಗಿ ಬಿಡಲು ಕೋರಿ ಈ ಪ್ರಾಧಿಕಾರಕ್ಕೆ ವಕಾಲತ್ತು ಸಲ್ಲಿಸಿರುತ್ತಾರೆ.

ದಿನಾಂಕ:31.01.2008 ರಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ಕಲಂ 43(ಎ) ಪ್ರಕಾರ ಈ ಪ್ರಾದೀಕಾರವು ದಿನಾಂಕ:06.12.2007 ರಂದು ವಿಚಾರಣೆ ನಡೆಸಲಾಗುವುದೆಂದು ಎಲ್ಲ ಸಾಕ್ಷಿದಾರರಿಗೆ ನೋಟೀಸು ತೆಗೆಯಲಾಯಿತು.

ದಿನಾಂಕ:22.02.2008ರಂದು ವಿಚಾರಣೆಯನ್ನು ನಡೆಸಲಾಯಿತು ಅಭಿಯೋಗದ ಪರವಾಗಿ ಸಾಕ್ಷಿದಾರರಾದ ಪ್ರಾ.ಸಾ–1 ರಿಂದ ಪ್ರಾ.ಸಾ.–4ರ ವರೆಗೆ ವಿಚಾರಣೆ ಮಾಡಿ ಏಳು (07) ದಾಖಲಾತಿಗಳನ್ನು ಮತ್ತು ಎರಡು ಮುದ್ದೇಮಾಲುಗಳನ್ನು ಗುರುತಿಸಿದ್ದು ಇರುತ್ತದೆ.

ಪ್ರಾಸಿಕ್ಯೂಶನ್ ಪರ ಸಾಕ್ಷಿ ನುಡಿದ ಪಿರ್ಯಾಧಿದಾರರು ಪ್ರಾ.ಸಾ–1 ತಮ್ಮ ಮುಖ್ಯ ವಿಚಾರಣೆಯಲ್ಲಿ ಸಾಕ್ಷಿ ನುಡಿಯುತ್ತಾ ತಾನು ದಿನಾಂಕ:17.08.2007 ರಂದು ಸಾಯಂಕಾಲ ನಮ್ಮ ಸರ್ಕಾರಿ ವಾಹನ ಸಂಖ್ಯೆ: ಕೆಎ–28–ಜಿ–310 ರಲ್ಲಿ ನಮ್ಮ ಸಿಬ್ಬಂದಿಯೊಂದಿಗೆ ಇಂಡಿ–ಆಲಮೇಲ ರಸ್ತೆಯಲ್ಲಿರುವ ಖೇಡಗಿ ಕ್ರಾಸ್ ಹತ್ತಿರ ರಸ್ತೆ ಕಾವಲು ಮಾಡುತ್ತಾ ನಿಂತಾಗ ಒಂದು ದ್ವಿಚಕ್ರ ವಾಹನವು ಸಾಲೋಟಗಿ ಗ್ರಾಮ ಕಡೆಯಿಂದ ಬರುತ್ತಿರುವುದನ್ನು ಕಂಡು ಕೈ ಸೊನ್ನೆ ಮಾಡಿ ನಿಲ್ಲಿಸಲು ಸೂಚಿಸಿದಾಗ ಸಮವಸ್ತ್ರದಲ್ಲಿದ್ದ ಸಿಬ್ಬಂದಿ ಜನರನ್ನು ಕಂಡು ಆ ವಾಹನ ನಿಲ್ಲದೇ ವೇಗವಾಗಿ ಅಲ್ಲಿಂದ ಪಾರಾಗಿ ಮುಂದೆ ಸಾಗಿತು. ಅದನ್ನು ಹಿಡಿಯಲು ಸರ್ಕಾರಿ ವಾಹನ ಸಂ:ಕೆಎ–28–ಜಿ–310 ನೇದ್ದರಲ್ಲಿ ಬೆನ್ನಹತ್ತಿದಾಗ ಸದರಿ ಮೋಟಾರ ಸೈಕಲ್ ಸವಾರದಾರನು ಮೋಟಾರ ಸೈಕಲ್‌ನ್ನು ರಸ್ತೆ ಬದಿಗೆ ಎಸೆದು ಓಡತೊಡಗಿದನು, ಆಗ ಅವನ್ನು ಹಿಡಿಯಲು ಪ್ರಯತ್ನಿಸಿದಾಗ ಅವನು ಓಡಿ ಹೋಗಿ ಕತ್ತಲಲ್ಲಿ ಪರಾರಿಯಾದನು ಎಂದು ಸಾಕ್ಷಿ ನುಡಿದಿರುತ್ತಾರೆ,.ನಂತರ ಸದರಿ ವಾಹನ ಬಿದ್ದ ಸ್ಥಳದ ಹತ್ತಿರ ಬಂದಾಗ ಅಲ್ಲಿ ಒಂದು ತಟ್ಟಿನ ಚೀಲ ಬಿದ್ದಿರುವುದನ್ನು ಕಂಡು ಅದನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ಓರಿಜಿನಲ್ ಚಾಯಿಸ್ ವ್ಹಿಸ್ಕಿಯ ಮದ್ಯ ತುಂಬಿದ ಬಾಟಲಿಗಳು ಕಂಡು ಬಂದವು ಆಗ ಯಾರಾದರೂ ಪಂಚ ಸಾಕ್ಷಿದಾರರು ಇದ್ದಾರೆ ಎಂಬ ಬಗ್ಗೆ ನೋಡಲು ತಮ್ಮ ಸಿಬ್ಬಂದಿ ಜನರಿಗೆ ತಿಳಿಸಿದಾಗ ಆ ಸ್ಥಳದಲ್ಲಿ ನೋಡಲಾಗಿ ರಾತ್ರಿ ಸಮಯ ಇರುವುದರಿಂದ ಯಾರು ಜನರು ಕಂಡು ಬರಲಿಲ್ಲ. ಕಾರಣ ಅಬಕಾರಿ ರಕ್ಷಕರಲ್ಲಿಯೇ ಇಬ್ಬರನ್ನು ಪಂಚ ಸಾಕ್ಷಿಯಾಗಿ ಪಂಚನಾಮೆ ನಡೆಸಿಕೊಡಲು ಕೇಳಿಕೊಂಡಿರುವುದರಿಂದ ಎರಡು ಜನ ಅಬಕಾರಿ ರಕ್ಷಕರು ಅದಕ್ಕೆ ಒಪ್ಪಿಕೊಂಡಿರುತ್ತಾರೆಂದು ಸಾಕ್ಷಿ ನುಡಿಯುತ್ತಾ, ಅವುಗಳನ್ನು ಎಲ್ಲರ ಸಮಕ್ಷಮ ಎಣಿಕೆ ಮಾಡಿ ನೋಡಲಾಗಿ ಅವುಗಳಲ್ಲಿ 180 ಮಿಲಿಯ 20 ಬಾಟಲಿಗಳು ಒಡೆದು ಹೋಗಿ ಮದ್ಯ ಸೋರಿ ಹೋಗಿರುವುದು ಕಂಡುಬಂದಿತು, ಇನ್ನುಳಿದ 180 ಮಿಲಿಯ 96 ಬಾಟಲಿಗಳು ಚೆನ್ನಾಗಿ ಇದ್ದು, ಅವುಗಳ ಮೇಲೆ ಓರಿಜಿನಲ್ ಚಾಯಿಸ್ ವ್ಹಿಸ್ಕಿ ಲೇಬಲ್ ಇರುತ್ತದೆ ಎಂದು ಸಾಕ್ಷಿ ನುಡಿದಿರುತ್ತಾರೆ. ಸದರಿ 96 ಬಾಟಲಿಗಳಲ್ಲಿ ಒಂದು ಬಾಟಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅದಕ್ಕೆ ತನ್ನ ವ ಪಂಚರ ಸಹಿ ಮಾಡಿದ ಚೀಟಿಗಳನ್ನು ಅಂಟಿಸಿ ಕಛೇರಿಯ ಶೀಲಿನಿಂದ ಶೀಲ್ ಮಾಡಿರುತ್ತಾರೆ. ಹಾಗೂ ಇನ್ನುಳಿದ ಬಾಟಲಿಗಳನ್ನು ಚೀಲದಲ್ಲಿ ಹಾಕಿ ಬಾಯಿಕಟ್ಟಿ ಶೀಲ್ ಮಾಡಿರುತ್ತಾರೆ. ನಂತರ ಅಲ್ಲಿಯೇ ಬಿದ್ದಿದ ಮೋಟಾರ್ ಸೈಕಲನ್ನು ಎತ್ತಿ ನಿಲ್ಲಿಸಿ ಸರ್ಕಾರಿ ವಾಹನದ ಹೆಡ್‌ಲೈಟ್ ಬೆಳಕಿನಲ್ಲಿ ಅದನ್ನು ನೋಡಲಾಗಿ ಅದು ಸುಜುಕಿ ಕಂಪನಿಯ ಹಿಟ್ 125 ಸಿ.ಸಿ. 5 ಸ್ಪೀಡ್ ದ್ವಿಚಕ್ರ ವಾಹನ ಅದರ ಚಾಸ್ಸಿ ನಂ. MBBNF4BAD78126776 ಇರುವುದು ತಿಳಿದುಕೊಂಡು ಸದರಿ ದ್ವಿಚಕ್ರ ವಾಹನ ಹಾಗೂ ಮುದ್ದೇಮಾಲನ್ನು ಮುಂದಿನ ತನಿಖೆಗಾಗಿ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿ ರಾತ್ರಿ 9 ಗಂಟೆಯಿಂದ 9–45 ರವರೆಗೆ ಪಂಚನಾಮೆಯನ್ನು ಬರೆದು ಮುಗಿಸಲಾಯಿತ್ತೆಂದು ಸಾಕ್ಷಿ ನುಡಿಯುತ್ತಾ, ಸದರಿ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–1 ಅಂತಾ ಗುರುತಿಸಲಾಯಿತು. ಅದರ ಮೇಲೆ ಇರುವ ಸಹಿ ತನ್ನದೆಂದು ಒಪ್ಪಿಕೊಂಡರು, ಆಗ ಅದಕ್ಕೆ ನಿಶಾನೆ–ಪಿ–1(ಅ) ಎಂದು ಗುರುತಿಸಲಾಯಿತು. ನಂತರ ಜಪ್ತು ಮಾಡಿದ ಮುದ್ದೇಮಾಲಿನೊಂದಿಗೆ ಕಛೇರಿಗೆ ಬಂದು ಗುನ್ನೆ ನಂ.04/2007–08 ನ್ನು ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ತಯಾರಿಸಲಾಯಿತು. ಸದರಿ ಪ್ರಥಮ ವರ್ತಮಾನ ವರದಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–2 ಎಂದು ಮತ್ತು ಅದರ ಮೇಲಿರುವ ಸಹಿಯನ್ನು ನಿಶಾನೆ–ಪಿ–2(ಅ) ಎಂದು ಗುರುತಿಸಲಾಯಿತು. ನಂತರ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ಇಂಡಿಯಲ್ಲಿ ಸರ್ಕಾರಿ ತರ್ಫೆ ಪಿರ್ಯಾಧಿಯನ್ನು ಸಲ್ಲಿಸಲಾಯಿತು, ಸದರಿ ಪಿರ್ಯಾಧಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–3 ಎಂದು ಅದರ ಮೇಲಿನ ಸಹಿಯನ್ನು ನಿಶಾನೆ–ಪಿ–3(ಅ) ಎಂದು ಗುರುತಿಸಲಾಯಿತು. ಮತ್ತು ಜಪ್ತು ಮಾಡಿದ ವಾಹನವು ಅದೇ ಈ ವಾಹನವೆಂದು ಸಾಕ್ಷಿ ನುಡಿದಿರುತ್ತಾರೆ. ಅದಕ್ಕೆ ಎಂಓ–1 ಎಂದು ಗುರುತಿಸಲಾಯಿತು.

ನಂತರ ದಿನಾಂಕ:25.08.2007 ರಂದು ಶ್ರೀ ಆರ್.ಪಿ. ರಾಠೋಡ ಅಬಕಾರಿ ರಕ್ಷಕ ಇತನೊಂದಿಗೆ ಕಛೇರಿಯ ಮುಖಪತ್ರದೊಂದಿಗೆ ಮುಖ್ಯ ರಸಾಯನಿಕ ತಜ್ಞರು ಬೆಂಗಳೂರು ಇವರಿಗೆ ಮಾದರಿಯಾಗಿ ತೆಗೆದ ರಸಾಯನಿಕ ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ಕಳುಹಿಸಿ ಕೊಡಲಾಯಿತು. ದಿನಾಂಕ:27.08.2007ರಂದು ಬರೆದ ರಸಾಯನಿಕ ತಜ್ಞರ ವರದಿಯಲ್ಲಿ ಜಪ್ತಾದ ಮದ್ಯದಲ್ಲಿ ಅಲ್ಕೋಹಾಲ್ ಅಂಶವಿದ್ದು ಅದು ನಕಲಿ ಮದ್ಯವಿರುತ್ತದೆ ಎಂದು ದೃಢೀಕರಿಸಿರುತ್ತಾರೆ. ಸದರಿ ರಸಾಯನಿಕ ಪ್ರತಿಯನ್ನು ಈಗ ನೋಡುತ್ತಿದ್ದು ಅದನ್ನು ನಿಶಾನೆ–ಪಿ–4 ಎಂದು ಗುರುತಿಸಲಾಯಿತು. ಜಪ್ತಾದ ವಾಹನ ಮುಂದಿನ ತನಿಖೆ ನಡೆಸಲಾಗಿ ಸದರಿ ವಾಹನವು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ನೋಂದಣಿ ಆಗಿರುವುದಿಲ್ಲ. ಆದರೆ ತಾತ್ಕಾಲಿಕವಾಗಿ ನೊಂದಣಿ ಮಾಡಿದ್ದು ಅದರ ನಂ.ಕೆಎ–28–ಟಿಆರ್–1673 ಇರುತ್ತದೆ, ಬಾಗೀರಥಿ ಮೋಟಾರ್ಸ್ (ಪಿ) ಲಿ ವಿಜಾಪುರ ಮತ್ತು ರಿಲಾಯನ್ಸ್ ಜನರಲ್ ಇನ್ಸೂರನ್ಸ್ ಕಂಪನಿಯವರು ನೀಡಿದ ಪತ್ರಗಳನ್ನು ಪರಿಶೀಲಿಸಲಾಗಿ ಈ ಎಲ್ಲ ದಾಖಲಾತಿಗಳಲ್ಲಿ ಸದರಿ ವಾಹನವು ಶಾಂತಪ್ಪ ಡಿ. ಕ್ಷತ್ರಿ ಸಾ:ನಾದ ಬಿ.ಕೆ. ತಾ: ಇಂಡಿ, ಜಿ: ವಿಜಾಪುರ ಇವರ ಹೆಸರಿನಲ್ಲಿರುವುದು ತಿಳಿದು ಬಂದಿರುತ್ತದೆ ಎಂದು ಸಾಕ್ಷಿ ನುಡಿದಿರುತ್ತಾರೆ, ಈ ಎಲ್ಲಾ ದಾಖಲಾತಿಗಳನ್ನು ಈ ದಿವಸ ನೋಡುತ್ತಿದ್ದು ಅವುಗಳಲ್ಲಿ ಇನ್‌ವಾಯಿಸ್

ಪ್ರತಿಯನ್ನು ನಿಶಾನೆ–ಪಿ–5, ಇನ್ಸೂರನ್ಸ್ ಪ್ರತಿಯನ್ನು ನಿಶಾನೆ–ಪಿ–6 ಮತ್ತು ಸಾರಿಗೆ ಅಧಿಕಾರಿಗಳ ತಾತ್ಕಾಲಿಕ ನೋಂದಣಿ ಪ್ರತಿಯನ್ನು ನಿಶಾನೆ–ಪಿ–7 ಎಂದು ಗುರುತಿಸಲಾಯಿತು. ಸಾಕ್ಷಿದಾರರ ಸಾಕ್ಷಿ ಹೇಳುವ ಸಮಯದಲ್ಲಿ ವಾಹನ ಮಾಲಿಕರಾದ ಶಾಂತಪ್ಪ ದಶರಥ ಕ್ಷತ್ರಿ ಇವರು ಹಾಜರಿದ್ದು, ವಾಹನ ಮಾಲಿಕರು ತಮ್ಮ ಪರವಾಗಿ ವಕೀಲರು ಬರದಿದ್ದರಿಂದ ಮುಂದಿನ ಮುದ್ದತ್ತಿನ ದಿವಸ ಪಾಟಿಸವಾಲು ಮಾಡಲಾಗುವುದೆಂದು ತಿಳಿಸಿರುವರು, ಮತ್ತು ಪಾಟೀ ಸವಾಲಿಗಾಗಿ ವೇಳೆಯನ್ನು ಕೋರಿದ್ದು ಪ್ರಕರಣವನ್ನು ಮುಂದೂಡಲಾಯಿತು.

ಪ್ರಾಸಿಕ್ಯೂಷನ್ ಪರ ಸಾಕ್ಷಿ ನುಡಿದ ಪಂಚಸಾಕ್ಷಿದಾರ ಪ್ರಾ.ಸಾ–2 ತಮ್ಮ ಮುಖ್ಯ ವಿಚಾರಣೆಯಲ್ಲಿ ಸಾಕ್ಷಿ ನುಡಿಯುತ್ತಾ ತಾನು ದಿನಾಂಕ:17.08.2007ರಂದು ಸಾಯಂಕಾಲ ನಮ್ಮ ಸರ್ಕಾರಿ ವಾಹನ ಸಂಖ್ಯೆ: ಕೆಎ–28–ಜಿ–310 ರಲ್ಲಿ ತಮ್ಮ ಅಧಿಕಾರಿಯೊಂದಿಗೆ ಇಂಡಿ–ಆಲಮೇಲ ರಸ್ತೆಯಲ್ಲಿರುವ ಖೇಡಗಿ ಕ್ರಾಸ್ ಹತ್ತಿರ ರಸ್ತೆ ಕಾವಲು ಮಾಡುತ್ತಾ ನಿಂತಾಗ ಒಂದು ದ್ವಿಚಕ್ರ ವಾಹನವು ಸಾಲೋಟಗಿ ಗ್ರಾಮ ಕಡೆಯಿಂದ ಬರುತ್ತಿರುವುದನ್ನು ಕಂಡರು, ಕೈ ಸೊನ್ನೆ ಮಾಡಿ ನಿಲ್ಲಿಸಲು ಸೂಚಿಸಿದಾಗ ಸಮವಸ್ತ್ರದಲ್ಲಿದ್ದ ಸಿಬ್ಬಂದಿ ಜನರನ್ನು ಕಂಡು ಆ ವಾಹನ ನಿಲ್ಲದೇ ವೇಗವಾಗಿ ಅಲ್ಲಿಂದ ಪಾರಾಗಿ ಮುಂದೆ ಸಾಗಿತು. ಅದನ್ನು ಹಿಡಿಯಲು ಸರ್ಕಾರಿ ವಾಹನ ಸಂಖ್ಯೆ: ಕೆಎ–28–ಜಿ–310 ನೇದ್ದರಲ್ಲಿ ಬೆನ್ನುಹತ್ತಿದಾಗ ಸದರಿ ಮೋಟಾರ್ ಸೈಕಲ್ ಸವಾರದಾರನು ಮೋಟಾರ್ ಸೈಕಲ್‌ನ್ನು ರಸ್ತೆ ಬದಿಗೆ ಎಸೆದು ಓಡತೊಡಗಿದನು, ಆಗ ಅವನನ್ನು ಹಿಡಿಯಲು ಪ್ರಯತ್ನಿಸಿದಾಗ ಅವನು ಓಡಿ ಹೋಗಿ ಕತ್ತಲಲ್ಲಿ ಪರಾರಿಯಾದನು. ನಂತರ ತಮ್ಮ ಅಧಿಕಾರಿಯೊಂದಿಗೆ ಸದರಿ ವಾಹನ ಬಿದ್ದ ಸ್ಥಳದ ಹತ್ತಿರ ಬಂದಾಗ ಅಲ್ಲಿ ಒಂದು ತಟ್ಟಿನ ಚೀಲ ಬಿದ್ದಿರುವುದನ್ನು ಕಂಡು ಅದನ್ನು ಎಲ್ಲರ ಸಮಕ್ಷಮ ಸಾಹೇಬರು ಬಿಚ್ಚಿ ನೋಡಲಾಗಿ ಅದರಲ್ಲಿ ಓರಿಜಿನಲ್ ಚಾಯಿಸ್ ವ್ಹಿಸ್ಕಿಯ ಮದ್ಯ ತುಂಬಿದ ಬಾಟಲಿಗಳು ಕಂಡು ಬಂದವು ಆಗ ಯಾರಾದರೂ ಪಂಚ ಸಾಕ್ಷಿದಾರರು ಇದ್ದಾರೆ ಎಂಬ ಬಗ್ಗೆ ನೋಡಲು ನಮ್ಮ ಸಾಹೆಬರು ತಿಳಿಸಿದರು. ಆ ಸ್ಥಳದಲ್ಲಿ ನೋಡಲಾಗಿ ರಾತ್ರಿ ಸಮಯ ಇರುವುದರಿಂದ ಯಾರು ಜನರು ಕಂಡು ಬರಲಿಲ್ಲ. ಕಾರಣ ನಮ್ಮನ್ನು ಪಂಚ ಸಾಕ್ಷಿಯಾಗಿ ಪಂಚನಾಮೆ ನಡೆಸಿಕೊಡಲು ಕೇಳಿಕೊಂಡಿರುವುದರಿಂದ ಅದಕ್ಕೆ ಒಪ್ಪಿಕೊಂಡು, ಅವುಗಳನ್ನು ಎಲ್ಲರ ಸಮಕ್ಷಮ ಎಣಿಕೆ ಮಾಡಿ ನೋಡಲಾಗಿ ಅವುಗಳಲ್ಲಿ 180 ಮಿಲಿಯ 20 ಬಾಟಲಿಗಳು ಒಡೆದು ಹೋಗಿ ಮದ್ಯ ಸೋರಿ ಹೋಗಿರುವುದು ಕಂಡುಬಂದಿತು, ಇನ್ನುಳಿದ 180 ಮಿಲಿಯ 96 ಬಾಟಲಿಗಳು ಚೆನ್ನಾಗಿದ್ದವು, ಅವುಗಳ ಮೇಲೆ ಓರಿಜಿನಲ್ ಚಾಯಿಸ್ ವ್ಹಿಸ್ಕಿಯ ಲೇಬಲ್‌ಗಳನ್ನು ಅಂಟಿಸಲಾಗಿತ್ತು. ಸದರಿ 96 ಬಾಟಲಿಗಳಲ್ಲಿ ಒಂದು ಬಾಟಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅದಕ್ಕೆ ನಮ್ಮ ವ ಅಧಿಕಾರಿಗಳ ಸಹಿ ಮಾಡಿದ ಚೀಟಿಯನ್ನು ಅಂಟಿಸಿ ಕಛೇರಿಯ ಶೀಲಿನಿಂದ ಶೀಲ್ ಮಾಡಿರುತ್ತಾರೆ. ಹಾಗೂ ಇನ್ನುಳಿದ ಬಾಟಲಿಗಳನ್ನು ಚೀಲದಲ್ಲಿ ಹಾಕಿ ಬಾಯಿಕಟ್ಟಿ ಶೀಲ್ ಮಾಡಿರುತ್ತಾರೆ. ನಂತರ ಅಲ್ಲಿಯೇ ಬಿದ್ದಿದ್ದ ಮೋಟಾರ್ ಸೈಕಲನ್ನು ಎತ್ತಿ ನಿಲ್ಲಿಸಿ ಸರ್ಕಾರಿ ವಾಹನದ ಬೆಳಕಿನಲ್ಲಿ ಅದನ್ನು ನೋಡಲಾಗಿ ಅದು ಸುಜುಕಿ ಕಂಪನಿಯ ಹಿಟ್ 125 ಸಿ.ಸಿ. 5ಸ್ಪೀಡ್ ದ್ವಿಚಕ್ರ ವಾಹನ ಅದರ ಚಾಸ್ಸಿ ನಂ. MBBNF4BAD78126776 ಇರುವುದು ತಿಳಿದುಕೊಂಡು ಸದರಿ ದ್ವಿಚಕ್ರ ವಾಹನ ಹಾಗೂ ಮುದ್ದೇಮಾಲನ್ನು ಮುಂದಿನ ತನಿಖೆಗಾಗಿ ಸಾಹೆಬರು ತಮ್ಮ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿ ರಾತ್ರಿ 9 ಗಂಟೆಯಿಂದ 9–45 ರ ವರೆಗೆ ಪಂಚನಾಮೆಯನ್ನು ಬರೆದು ಮುಗಿಸಲಾಯಿತ್ತೆಂದು ಸಾಕ್ಷಿ ನುಡಿಯುತ್ತಾ, ಸದರಿ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದರ ಮೇಲಿನ ಸಹಿಯನ್ನು ತನ್ನದೆಂದು ಗುರುತಿಸಿರುತ್ತಾರೆ. ಅದಕ್ಕೆ ನಿಶಾನೆ–ಪಿ–1(ಬಿ) ಎಂದು ಗುರುತಿಸಲಾಯಿತು. ಸಾಕ್ಷಿದಾರರ ಸಾಕ್ಷಿ ಹೇಳುವ ಸಮಯದಲ್ಲಿ ವಾಹನ ಮಾಲೀಕರಾದ ಶಾಂತಪ್ಪ ದಶರಥ ಕ್ಷತ್ರಿ ಇವರು ಹಾಜರಿದ್ದು, ಪಾಟೀ ಸವಾಲಿಗಾಗಿ ವೇಳೆಯನ್ನು ಕೋರಿದ್ದು ಪ್ರಕರಣವನ್ನು ಮುಂದೂಡಲಾಯಿತು. ಮತ್ತೊಬ್ಬ ಪಂಚಸಾಕ್ಷಿದಾರರಾದ ಶ್ರೀ ಆರ್.ಪಿ. ರಾಠೋಡ ಇವರ ಸಾಕ್ಷಿಯನ್ನು ಪಡೆಯಲಾಯಿತು. ಇವರು ಕೂಡಾ ಸರ್ಕಾರಿ ನೌಕರಿದ್ದು ರಾತ್ರಿ ಸಮಯದಲ್ಲಿ ಪಂಚ ಜನರು ಸಿಗದಿದ್ದರಿಂದ ಇವರೇ ಪಂಚ ಸಾಕ್ಷಿದಾರರಾಗಿರುತ್ತಾರೆ. ಸದರಿ ಪ್ರಕರಣದಲ್ಲಿ ಮತ್ತೊಬ್ಬ ಪಂಚಸಾಕ್ಷಿದಾರರಾದ ಶ್ರೀ ಅಶೋಕ ಸೋಮಲಿಂಗ ಗೋಣಸಗಿ ಇವರು ಕೂಡಾ ಸರ್ಕಾರಿ ನೌಕರರಿದ್ದು, ಅಭಿಯೋಗದ ಪರವಾಗಿ ಸಾಕ್ಷಿ ನುಡಿದಿರುತ್ತಾರೆ. ಈ ಪಂಚ ಸಾಕ್ಷಿದಾರನು ಸಾಕ್ಷಿ ನುಡಿದಂತೆ ಶ್ರೀ ಆರ್.ಪಿ. ರಾಠೋಡ ಈತನು ಅಭಿಯೋಗದ ಪರವಾಗಿ ಸಾಕ್ಷಿ ನುಡಿದಿರುತ್ತಾನೆ. ಮತ್ತು ಸಾಕಷ್ಟು ಪುಷ್ಠಿ ನೀಡಿರುತ್ತಾರೆ. ಈತನ ಸಾಕ್ಷಿ ಪಡೆಯುವ ಸಮಯದಲ್ಲಿ ವಾಹನ ಮಾಲೀಕರು ಹಾಜರಿದ್ದರು, ಆದರೆ ಪಾಟೀ ಸವಾಲು ಮಾಡಲು ಕಾಲಾವಕಾಶ ಕೇಳಿದ್ದರಿಂದ ನ್ಯಾಯದ ಹಿತದೃಷ್ಟಿಯಿಂದ ಕಾಲಾವಕಾಶ ನೀಡಲಾಗಿರುತ್ತದೆ.

ಫಿರ್ಯಾಧಿಕಾರರು ತಮ್ಮ ಕಛೇರಿಯ ಎಸ್.ಸಿ.ಬಂಡಿ ಇವರ ಹೇಳಿಕೆಯನ್ನು ಪಡೆದಿರುತ್ತಾರೆ. ಸದರಿ ಸಾಕ್ಷಿದಾರರು ಈ ದಿನ ಹಾಜರ ಇರುವುದರಿಂದ ಅವರ ಸಾಕ್ಷಿ ಪಡೆಯಲಾಯಿತು. ಇವರ ಸಾಕ್ಷಿಯಲ್ಲಿ ತಮ್ಮ ಸರ್ಕಾರಿ ವಾಹನ ಸಂಖ್ಯೆ: ಕೆಎ–28–ಜಿ–310 ರಲ್ಲಿ ಅಧಿಕಾರಿಯೊಂದಿಗೆ ಇಂಡಿ–ಆಲಮೇಲ ರಸ್ತೆಯಲ್ಲಿರುವ ಖೇಡಗಿ ಕ್ರಾಸ್ ಹತ್ತಿರ ರಸ್ತೆ ಕಾವಲು ಮಾಡುತ್ತಾ ನಿಂತಾಗ ಒಂದು ದ್ವಿಚಕ್ರ ವಾಹನವು ಸಾಲೋಟಗಿ ಗ್ರಾಮ ಕಡೆಯಿಂದ ಬರುತ್ತಿರುವುದನ್ನು ಕಂಡರು. ಕೈ ಸೊನ್ನೆ ಮಾಡಿ ನಿಲ್ಲಿಸಲು ಸೂಚಿಸಿದಾಗ ಸಮವಸ್ತ್ರದಲ್ಲಿದ್ದ ಸಿಬ್ಬಂದಿ ಜನರನ್ನು ಕಂಡು ಆ ವಾಹನ ನಿಲ್ಲದೇ ವೇಗವಾಗಿ ಅಲ್ಲಿಂದ ಪಾರಾಗಿ ಮುಂದೆ ಸಾಗಿತು. ಅದನ್ನು ಹಿಡಿಯಲು ಸರ್ಕಾರಿ ವಾಹನ ಸಂ:ಕೆಎ–28–ಜಿ–310 ನೇದ್ದರಲ್ಲಿ ಬೆನ್ನಹತ್ತಿದಾಗ ಸದರಿ ಮೋಟಾರ್ ಸೈಕಲ್ ಸವಾರದಾರನು ಮೋಟಾರ್ ಸೈಕಲ್‌ನ್ನು ರಸ್ತೆ ಬದಿಗೆ ಎಸೆದು ಓಡತೊಡಗಿದನು, ಆಗ ಅವನನ್ನು ಹಿಡಿಯಲು ಪ್ರಯತ್ನಿಸಿದಾಗ ಅವನು ಓಡಿ ಹೋಗಿ ಕತ್ತಲಲ್ಲಿ ಪರಾರಿಯಾದನು. ನಂತರ ತಮ್ಮ ಅಧಿಕಾರಿಯೊಂದಿಗೆ ಸದರಿ ವಾಹನ ಬಿದ್ದ

ಸ್ಥಳದ ಹತ್ತಿರ ಬಂದಾಗ ಅಲ್ಲಿ ಒಂದು ತಟ್ಟಿನ ಚೀಲ ಬಿದ್ದಿರುವುದನ್ನು ಕಂಡು ಅದನ್ನು ಎಲ್ಲರ ಸಮಕ್ಷಮ ಸಾಹೆಬರು ಬಿಚ್ಚಿ ನೋಡಲಾಗಿ ಅದರಲ್ಲಿ ಓರಿಜಿನಲ್ ಚಾಯಿಸ್ ವ್ಹಿಸ್ಕಿಯ ಮದ್ಯ ತುಂಬಿದ ಬಾಟಲಿಗಳು ಕಂಡು ಬಂದವು ಆಗ ಯಾರಾದರೂ ಪಂಚ ಸಾಕ್ಷಿದಾರರು ಇದ್ದಾರೆ ಎಂಬ ಬಗ್ಗೆ ನೋಡಲು ನಮ್ಮ ಸಾಹೇಬರು ತಿಳಿಸಿದರು. ಆ ಸ್ಥಳದಲ್ಲಿ ನೋಡಲಾಗಿ ರಾತ್ರಿ ಸಮಯ ಇರುವುದರಿಂದ ಯಾರು ಜನರು ಕಂಡು ಬರಲಿಲ್ಲ. ಕಾರಣ ಆರ್.ಪಿ. ರಾಠೋಡ ಮತ್ತು ಅಶೋಕ ಸೋಮಲಿಂಗ ಗೊಣಸಗಿ ಇವರುಗಳನ್ನು ಪಂಚ ಸಾಕ್ಷಿಯಾಗಿ ಪಂಚನಾಮೆ ನಡೆಸಿಕೊಡಲು ಕೇಳಿಕೊಂಡಿರುವುದರಿಂದ ಅದಕ್ಕೆ ಅವರು ಒಪ್ಪಿಕೊಂಡು, ಅವುಗಳನ್ನು ಎಲ್ಲರ ಸಮಕ್ಷಮ ಎಣಿಕೆ ಮಾಡಿ ನೋಡಲಾಗಿ ಅವುಗಳಲ್ಲಿ 180 ಮಿಲಿಯ 20 ಬಾಟಲಿಗಳು ಒಡೆದು ಹೋಗಿ ಮದ್ಯ ಸೋರಿ ಹೋಗಿರುವುದು ಕಂಡುಬಂದಿತು, ಇನ್ನುಳಿದ 180 ಮಿಲಿಯ 96 ಬಾಟಲಿಗಳು ಚೆನ್ನಾಗಿದ್ದವು, ಅವುಗಳ ಮೇಲೆ ಓರಿಜಿನಲ್ ಚಾಯಿಸ್ ವ್ಹಿಸ್ಕಿಯ ಲೇಬಲ್‌ಗಳನ್ನು ಅಂಟಿಸಲಾಗಿತ್ತು. ಸದರಿ 96 ಬಾಟಲಿಗಳಲ್ಲಿ ಒಂದು ಬಾಟಲಿಯನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅದಕ್ಕೆ ಪಂಚ ಜನರ ಮತ್ತು ಅಧಿಕಾರಿಗಳ ಸಹಿ ಮಾಡಿದ ಚೀಟಿಗಳನ್ನು ಅಂಟಿಸಿ ಕಛೇರಿಯ ಶೀಲಿನಿಂದ ಶೀಲ್ ಮಾಡಿರುತ್ತಾರೆ. ಹಾಗೂ ಇನ್ನುಳಿದ ಬಾಟಲಿಗಳನ್ನು ಚೀಲದಲ್ಲಿ ಹಾಕಿ ಬಾಯಿಕಟ್ಟಿ ಶೀಲ್ ಮಾಡಿರುತ್ತಾರೆ. ನಂತರ ಅಲ್ಲಿಯೇ ಬಿದ್ದಿದ್ದ ಮೋಟಾರ್ ಸೈಕಲನ್ನು ಎತ್ತಿ ನಿಲ್ಲಿಸಿ ಸರ್ಕಾರಿ ವಾಹನದ ಬೆಳಕಿನಲ್ಲಿ ಅದನ್ನು ನೋಡಲಾಗಿ ಅದು ಸುಜುಕಿ ಕಂಪನಿಯ ಹಿಟ್ 125 ಸಿ.ಸಿ. 5 ಸ್ಪೀಡ್ ದ್ವಿಚಕ್ರ ವಾಹನ ಅದರ ಚಾಸ್ಸಿ ನಂ. MBBNF4BAD78126776 ಇರುವುದು ತಿಳಿದುಕೊಂಡು ಸದರಿ ದ್ವಿಚಕ್ರ ವಾಹನ ಹಾಗೂ ಮುದ್ದೇಮಾಲನ್ನು ಮುಂದಿನ ತನಿಖೆಗಾಗಿ ಸಾಹೆಬರು ತಮ್ಮ ತಬಾಕ್ಕೆ ತೆಗೆದುಕೊಂಡು ಘಟನೆ ನಡೆದ ಸ್ಥಳದಲ್ಲಿಯೇ ಪಂಚನಾಮೆಯನ್ನು ಬರೆದು ಮುಗಿಸಲಾಯಿತ್ತೆಂದು ಸಾಕ್ಷಿ ನುಡಿದಿರುತ್ತಾರೆ. ಜಪ್ತಾದ ವಾಹನವೇ ಈ ವಾಹನವೆಂದು ಗುರುತಿಸಿರುತ್ತಾರೆ. ಅದನ್ನು ಈಗಾಗಲೇ ಎಂಓ–1 ಎಂದು ಗುರುತಿಸಲಾಗಿರುತ್ತದೆ. ವಾಹನ ಮಾಲೀಕರು ಹಾಜರಿದ್ದು, ವಾಹನ ಮಾಲೀಕರ ಪಾಟೀ ಸವಾಲು ಮಾಡಲು ಕಾಲಾವಕಾಶ ಕೇಳಿಕೊಂಡಿರುವುದರಿಂದ ನ್ಯಾಯದ ಹಿತದೃಷ್ಠಿಯಿಂದ ಕಾಲಾವಕಾಶವನ್ನು ನೀಡಿ ಪ್ರಕರಣವನ್ನು ದಿನಾಂಕ:01.02.2008ಕ್ಕೆ ಮುಂದೂಡಲಾಯಿತು.

ದಿನಾಂಕ:01.02.2008 ರಂದು ಪ್ರಕರಣದ ವಿಚಾರಣೆಯನ್ನು ನಡೆಸಲಾಯಿತು. ಸದರಿ ದಿನದಂದು ಎಲ್ಲಾ ಸಾಕ್ಷಿದಾರರು ಮತ್ತು ವಾಹನ ಮಾಲಿಕರು ಹಾಜರಿದ್ದು ಅವರ ಪರ ವಕೀಲರು ಹಾಜರ ಇರುವುದಿಲ್ಲ. ವಾಹನ ಮಾಲಿಕರು ಸದರಿ ಜಪ್ತಾದ ವಾಹನವು ತನ್ನ ಮಾಲಿಕೆಯದಿದ್ದು, ಅದನ್ನು ಅಬಕಾರಿ ಅಧಿಕಾರಿಗಳು ಜಪ್ತು ಮಾಡಿದ್ದು ಇರುತ್ತದೆ. ಈ ಪ್ರಕರಣದಲ್ಲಿ ಸಾಕ್ಷಿದಾರರ ಪಾಟೀ ಸವಾಲು ಮತ್ತು ಯಾವುದೇ ಸಾಕ್ಷಿ ಇರುವುದಿಲ್ಲವೆಂದು ಲಿಖಿತ ಹೇಳಿಕೆ ಮೂಲಕ ಹೇಳಿಕೆಯನ್ನು ನೀಡಿರುತ್ತಾರೆ. ಆದ್ದರಿಂದ ವಾಹನ ಮಾಲಿಕರ ಪರವಾಗಿ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು. ಮತ್ತು ಸದರಿ ವಾಹನವು ಅಕ್ರಮವಾಗಿ ನಕಲಿ ಮದ್ಯ ಸಾಗಾಣಿಕೆಗೆ ಬಳಕೆಯಾಗಿದ್ದಕ್ಕೆ ಸಾಕ್ಷಿದಾರರು ನೀಡಿದ ಅಭಿಯೋಗದ ಪರವಾಗಿ ಸಾಕ್ಷಿ ಸಾಕಷ್ಟು ಪುಷ್ಠಿ ನೀಡುತ್ತದೆ.

ಪ್ರಾಸಿಕ್ಯೂಷನ್ ಪರ ಸಾಕ್ಷಿ ಹಾಗೂ ಎ.ಡಿ.ಪಿ. ರವರ ವಾದದ ಆಧಾರದ ಮೇಲೆ ಮುಂದಿನ ಆದೇಶ ಹೊರಡಿಸುವ ಮುನ್ನ ಈ ಕೆಳಕಂಡ ವಿವಾದಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ಮೊದಲನೆಯ ವಿವಾದಾಂಶ:**

ದಿನಾಂಕ:17.08.2007 ರಂದು ಸದರಿ ವಾಹನದಲ್ಲಿ ನಕಲಿ ಮದ್ಯ ತುಂಬಿದ ಬಾಟಲಿಗಳನ್ನು ಸಾಗಾಣಿಕೆಯಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32, 34 ರೀತ್ಯಾ ಅಪರಾಧವಾಗಿದೆಯೇ? ಅಥವಾ ಇಲ್ಲಾ?

**ಎರಡನೆಯ ವಿವಾದಾಂಶ:**

ಸದರಿ ವಾಹನದಲ್ಲಿ ನಕಲಿ ಮದ್ಯ ತುಂಬಿದ ಬಾಟಲಿಗಳನ್ನು ಸಾಗಾಣಿಕೆಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲೀ ಅಥವಾ ವಾಹನ ಚಾಲಕರಾಗಲೀ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೇಯ ವಿವಾದಾಂಶ:**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ–ಸಕಾರಾತ್ಮಕ (ಹೌದು):**

ಪ್ರಾಸಿಕ್ಯೂಷನ್ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸುತ್ತಾರೆ. ಪಂಚರ ಸಾಕ್ಷಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಪ್ರಕರಣದಲ್ಲಿ ಆರೋಪಿಸಿರುವ ಅಂಶವಾದ ಸದರಿ ವಾಹನದಲ್ಲಿ ಮದ್ಯ ತುಂಬಿದ ಬಾಟಲಿಗಳನ್ನು ಸಾಗಾಣಿಕೆ ಮಾಡುತ್ತಿದ್ದು, ಸದರಿ ಬಾಟಲಿಗಳಲ್ಲಿ ನಕಲಿ ಮದ್ಯ ಇರುತ್ತದೆ ಎಂದು ರಸಾಯನಿಕ ವಿಶ್ಲೇಷಣೆಯ ವರದಿಯಿಂದ ದೃಢಪಟ್ಟಿರುತ್ತದೆ. ಸದರಿ ನಕಲಿ ಮದ್ಯ ತುಂಬಿದ ಬಾಟಲಿಗಳನ್ನು ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳು ವಾಹನದಲ್ಲಿ ಇಲ್ಲದಿರುವ ಅಂಶವನ್ನು ಗಮನಿಸಿದಾಗ ಸದರಿ ವಾಹನದಲ್ಲಿ ನಕಲಿ ಮದ್ಯ ತುಂಬಿದ ಬಾಟಲಿಗಳು ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದೆ.

**ಎರಡನೆಯ ವಿವಾದಾಂಶಕ್ಕೆ ಉತ್ತರ–ಇಲ್ಲಾ:**

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ವಾಹನದಲ್ಲಿ ನಕಲಿ ಮದ್ಯ ತುಂಬಿದ ಬಾಟಲಿಗಳು ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು, ಈ ಪ್ರಕರಣವು ಸಂಭವಿಸಿದ ಸಮಯದಲ್ಲಿ ಆರೋಪಿ ವಾಹನದ ಚಾಲಕನ ತಿಳುವಳಿಕೆಯಿಂದ ಹಾಗೂ ಇತನ ಶಾಮೀಲಿನಿಂದಲೇ ಸದರಿ ವಾಹನದಲ್ಲಿ ನಕಲಿ ಮದ್ಯ ತುಂಬಿದ ಬಾಟಲಿಗಳು ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ರುಜುವಾತು ಆಗಿದ್ದು, ವಾಹನದ ಮಾಲೀಕನಿಂದ ಅಥವಾ ಸದರಿ ವಾಹನದ ಚಾಲಕನಿಂದಲೂ ಅವನು ತಿಳುವಳಿಕೆಯಿಂದಲೇ ವಾಹನದಲ್ಲಿ ನಕಲಿ ಮದ್ಯ ತುಂಬಿದ ಬಾಟಲಿಗಳನ್ನು ಸಾಗಾಣಿಕೆಯಾಗಿರುತ್ತದೆ ಎಂಬುದು ಸಂದೇಹಾತೀತವಾಗಿ ರುಜುವಾತುವಾಗಿದೆ. ಇದನ್ನು ಅಲ್ಲಗಳೆಯಲು ವಾಹನ ಮಾಲಿಕನು ಈ ಪ್ರಾಧಿಕಾರದ ಮುಂದೆ ಹಾಜರಾಗಿದ್ದು, ಮತ್ತು ತನ್ನ ಪರ ಯಾವುದೇ ಸಾಕ್ಷಾಧಾರಗಳನ್ನು ಸಹ ನೀಡಿರುವುದಿಲ್ಲ.

ನಿಯಮ 43(ಬಿ) (2) ರನ್ವಯ ಸ್ವತಃ ವಾಹನದ ಮಾಲಿಕ ಅಥವಾ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಅಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಭೀತು ಪಡಿಸಬೇಕಾಗಿರುತ್ತದೆ. ಆದರೆ ವಾಹನ ಮಾಲಿಕರು ತಮ್ಮ ಹೇಳಿಕೆಯಿಂದಾಗಲೀ ಅಥವಾ ಸಾಕ್ಷಾಧಾರಗಳಿಂದಾಗಲೀ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಭೀತು ಪಡಿಸಿರುವುದಿಲ್ಲ.

**ಮೂರನೇ ವಿವಾದಾಂಶಕ್ಕೆ ಉತ್ತರ–ಹೌದು:**

ಮೊದಲನೇಯ ಮತ್ತು ಎರಡನೇಯ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡು ಬಂದಿರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

**ಸಂಖ್ಯೆ: ಇಎಕ್ಸ್‌ಇ:ಬಿಜೆಪಿ: ಇ.ಐ.ಬಿ.ಡಿಟಿಸಿಆರ್:31/2007–08, ದಿನಾಂಕ:22ನೇ ಫೆಬ್ರವರಿ, 2008**

ಕೆ.ಆರ್. ಗೌಡ್ರ, ಪ್ರಾದೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಮತ್ತು 43(ಸಿ) ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಇಂಡಿ ಇವರ ಮೊಕದ್ದಮೆ ಸಂಖ್ಯೆ:04/2006–07 ದಿನಾಂಕ:17.08.2007ರಲ್ಲಿ ವಶಪಡಿಸಿಕೊಂಡಿರುವ ದ್ವಿಚಕ್ರ ವಾಹನ ಸುಜುಕಿ ಹಿಟ್ 125 ಸಿಸಿ ಚಾಸ್ಸಿ ಸಂಖ್ಯೆ: MBBNF4BAD78126776 ಮತ್ತು 180 ಮಿಲಿಯ ನಕಲಿ ಮದ್ಯ ತುಂಬಿದ 96 ಬಾಟಲಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಅಬಕಾರಿ ಉಪ ಅಧೀಕ್ಷಕರು ಬಿಜಾಪುರ ಉಪ ವಿಭಾಗ ಇವರ ಸಮಕ್ಷಮ (ಸ್ಯಾಂಪಲ್ ಬಾಟಲಿಗಳನ್ನು ಹೊರತುಪಡಿಸಿ) ಮೇಲ್ಕಾಣಿಸಿದ ನಕಲಿ ಮದ್ಯವನ್ನು ನಾಶಪಡಿಸಲು ಆದೇಶಿಸಿದೆ. ಮತ್ತು ಉಳಿದ ಖಾಲಿ ಬಾಟಲಿಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಇಂದು ದಿನಾಂಕ:22.02.2008ರಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚಿಸಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿದೆ.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ

ಅಧೀಕ್ಷಕರು ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

**ಅನುಬಂಧ (1)**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | |
|---|---|---|
| **ಪ್ರಾ.ಸಾ–1** | ಶ್ರೀ ಎಸ್.ಎನ್. ಹಿರೇಮಠ ಅಬಕಾರಿ ಉಪ ನಿರೀಕ್ಷಕರು ಜಾರಿ ಮತ್ತು ತನಿಖೆ ಇಂಡಿ | ಪಿರ್ಯಾಧಿದಾರರು. |
| **ಪ್ರಾ.ಸಾ–2** | ಅಶೋಕ ಸೋಮಲಿಂಗ ಗೊಣಸಗಿ ಅ.ರ. ಅಬಕಾರಿ ಉಪ ನಿರೀಕ್ಷಕರು ಕಛೇರಿ ಜಾ & ತ ಇಂಡಿ ತಾಲ್ಲೂಕು | |

**ಅನುಬಂಧ (2)**

**ಪಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು**

| | |
|---|---|
| ನಿಶಾನೆ–ಪಿ–1 | ಪಂಚನಾಮೆ |
| ನಿಶಾನೆ–ಪಿ–1–(ಎ) | ಪಿರ್ಯಾಧಿದಾರರ ಸಹಿ |

| | |
|---|---|
| ನಿಶಾನೆ–ಪಿ–2 | ಪ್ರಥಮ ವರ್ತಮಾನ ವರದಿ |
| ನಿಶಾನೆ–ಪಿ–2(ಎ) | ಪ್ರಾಸಾ–1 ರವರ ಸಹಿ |
| ನಿಶಾನೆ–ಪಿ–3 | ಪಿರ್ಯಾಧಿ |
| ನಿಶಾನೆ–ಪಿ–3–(ಎ) | ಪ್ರಾ.ಸಾ–1 ರವರ ಸಹಿ |
| ನಿಶಾನೆ–ಪಿ–1 (ಬಿ) | ಪ್ರಾ.ಸಾ–2 ರವರ ಸಹಿ |
| ನಿಶಾನೆ–ಪಿ–4 | ರಸಾಯನಿಕ ತಜ್ಞರ ವರದಿ |
| ನಿಶಾನೆ–ಪಿ–5 | ಇನ್‌ವಾಯಿಸ್ ಪ್ರತಿ |
| ನಿಶಾನೆ–ಪಿ–6 | ಇನ್ಸೂರನ್ಸ್ ಪ್ರತಿ |
| ನಿಶಾನೆ–ಪಿ–7 | ಸಾರಿಗೆ ಅಧಿಕಾರಿಗಳ ನೊಂದಣಿ ಪ್ರತಿ. |

**ಅನುಬಂಧ–(3)**

**ಫಿರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು**

1) ಎಂ.ಓ.–1 ಮಾದರಿ ನಕಲಿ ಮದ್ಯ ತುಂಬಿದ ಬಾಟಲಿಗಳು

2) ಎಂ.ಓ.–02 ದ್ವಿಚಕ್ರ ವಾಹನ ಚಾಸ್ಸಿ ನಂ. MBBNF4BAD78126776

**ಅನುಬಂಧ–(4)**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು.

ಇಲ್ಲಾ.

**ಅನುಬಂಧ–(5)**

ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು

ಇಲ್ಲಾ.

**ಕೆ.ಆರ್. ಗೌಡ್ರ**

ಪಿ.ಆರ್.335

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು

ಇ.ಐ.ಬಿ. ಬಿಜಾಪುರ ಜಿಲ್ಲೆ, ಬಿಜಾಪುರ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ನಂ.ಸಿಸಿಎ(ಎಂಎಸ್‌ಸಿ) ಸಿಆರ್.05/2004–05, ದಿನಾಂಕ:15ನೇ ಮಾರ್ಚ್, 2008**

**ವಿಷಯ:** ಶ್ರೀ ಆರ್. ಸತೀಶ್‌ಕುಮಾರ್, ದ್ವಿ.ದ.ಸ. ತಹಶೀಲ್ದಾರ್ ಕಛೇರಿ, ಬಾಗೇಪಲ್ಲಿ, ಇವರು ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿ ಸರ್ಕಾರಿ ಹಣ ದುರುಪಯೋಗಪಡಿಸಿ ಕೊಂಡಿರುವುದಕ್ಕಾಗಿ ಶಿಸ್ತಿನ ಕ್ರಮ ತೆಗೆದುಕೊಳ್ಳುವ ಬಗ್ಗೆ.

**ಉಲ್ಲೇಖ:** 1) ತಹಶೀಲ್ದಾರರು, ಬಾಗೇಪಲ್ಲಿ ತಾಲ್ಲೂಕು ರವರ ಪತ್ರದ ಸಂಖ್ಯೆ: ಎಡಿಎಂ.ಸಿಆರ್. 29/2003–04 ದಿನಾಂಕ:04.11.2003 ರಲ್ಲಿ ಸಹಾಯಕ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ ರವರಿಗೆ ಸಲ್ಲಿಸಿರುವ ವರದಿ.

2) ಸಹಾಯಕ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ರವರ ಈ ಕಛೇರಿಗೆ ಬರೆದ ಪತ್ರದ ಸಂಖ್ಯೆ: ಇಎಸ್‌ಟಿ (1) ಸಿಆರ್ 64/2003–04, ದಿನಾಂಕ:12.11.2003 ಮತ್ತು 07.01.2004.

3) ಈ ಕಛೇರಿಯ ಆದೇಶದ ಸಂಖ್ಯೆ:ಸಿಬ್ಬಂದಿ(1) ಸಿಆರ್.221/2003–04, ದಿನಾಂಕ:17.11.2003.

4) ಈ ಕಛೇರಿಯ ಸಮಸಂಖ್ಯೆಯ ದಿನಾಂಕ:18.10.2004ರ ಸೂಚನಾ ಪತ್ರ.

5) ಈ ಕಛೇರಿಯ ಸಮಸಂಖ್ಯೆಯ ದಿನಾಂಕ:17.05.2006ರ ನೋಟೀಸು.

6) ತಹಶೀಲ್ದಾರರು ಬಾಗೇಪಲ್ಲಿ ತಾಲ್ಲೂಕು ರವರ ಪತ್ರದ ಸಂಖ್ಯೆ: ಇಎಸ್‌ಟಿ. ಸಿಆರ್.272/2007–08, ದಿನಾಂಕ:20.02.2008.

**ಪ್ರಸ್ತಾವನೆ:**

ಶ್ರೀ ಆರ್. ಸತೀಶ್‌ಕುಮಾರ್, ದ್ವಿ.ದ.ಸ. ತಹಶೀಲ್ದಾರರ ಕಛೇರಿ, ಬಾಗೇಪಲ್ಲಿ ಇವರು ತಹಶೀಲ್ದಾರರ ಕಛೇರಿಯ ಡಿ. ಗ್ರೂಪ್ ನೌಕರನ ಸಾಮಾನ್ಯ ಭವಿಷ್ಯ ನಿಧಿ ಮುಂಗಡ ಹಣ ರೂ.43000/– ಹಾಗೂ ಕಛೇರಿ ವಾಹನದ ಇಂಧನದ ವೆಚ್ಚ ರೂ.20377/–ಗಳನ್ನು ಅವರುಗಳಿಗೆ ಪಾವತಿಸಿದಂತೆ ಬಟವಾಡೆ ವಹಿಗಳಲ್ಲಿ ಮುಂಗಡವಾಗಿ ಸಹಿಗಳನ್ನು ಪಡೆದು, ಸಂಬಂಧಪಟ್ಟವರಿಗೆ ಪಾವತಿಸದೆ ಒಟ್ಟು ರೂ.63377/–ಗಳೊಂದಿಗೆ ಪರಾರಿಯಾಗಿದ್ದು, ದಿನಾಂಕ:28.10.2003 ರಿಂದ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ ಎಂದು ತಹಶೀಲ್ದಾರರು, ಬಾಗೇಪಲ್ಲಿ ತಾಲ್ಲೂಕು ರವರು ಉಲ್ಲೇಖ (1)ರಲ್ಲಿ ತಿಳಿಸಿರುವ ಪತ್ರದಲ್ಲಿ ಸಹಾಯಕ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ರವರಿಗೆ ವರದಿ ಸಲ್ಲಿಸಿರುತ್ತಾರೆ.

ಸಹಾಯಕ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ ರವರು ಉಲ್ಲೇಖ (2)ರಲ್ಲಿ ತಿಳಿಸಿರುವ ದಿನಾಂಕ:12.11.2003ರ ಪತ್ರದ ಮುಖೇನ ವರದಿಯನ್ನು ಸಲ್ಲಿಸಿ, ಸಂಬಂಧಪಟ್ಟ ನೌಕರರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಶಿಫಾರಸ್ಸು ಮಾಡಿದ ಮೇರೆಗೆ ಸದ್ರಿ ನೌಕರರನ್ನು ಉಲ್ಲೇಖ (3)ರಲ್ಲಿ ತಿಳಿಸಿರುವ ಈ ಕಛೇರಿಯ ಆದೇಶದಲ್ಲಿ ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಿಂದ ಅಮಾನತ್ತುಪಡಿಸಿರುತ್ತೆ. ಸಹಾಯಕ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ ರವರು ಉಲ್ಲೇಖ (2)ರಲ್ಲಿ ತಿಳಿಸಿರುವ ದಿನಾಂಕ:07.01.2004ರ ಪತ್ರದ ಮುಖೇನ ನೌಕರರು ದಿನಾಂಕ:28.10.2003 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾಗಿರುವುದಾಗಿ ಹಾಗೂ ಸರ್ಕಾರಿ ಹಣವನ್ನು ದುರುಪಯೋಗ ಪಡಿಸಿಕೊಂಡಿರುವುದಕ್ಕಾಗಿ, ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕರಡು ದೋಷಾರೋಪಣಾ ಪಟ್ಟಿಯನ್ನು ಕಳುಹಿಸಿರುತ್ತಾರೆ.

ಈ ನೌಕರರು ಅನಧಿಕೃತ ಗೈರು ಹಾಜರಿಯಲ್ಲಿದ್ದು, ಅವರು ಎಲ್ಲಿದ್ದಾರೆ? ಎಂಬುದು ತಿಳಿದು ಬಾರದ ಕಾರಣ ಅವರ ವಿರುದ್ಧ ಉದ್ದೇಶಿಸಲಾಗಿದ್ದ ಶಿಸ್ತಿನ ಕ್ರಮ ನಡವಳಿಗಳ ಬಗ್ಗೆ ತಿಳುವಳಿಕೆ ನೀಡುವ ಸಲುವಾಗಿ ಈ ಕಛೇರಿಯ ಸಮಕ್ರಮಾಂಕ ಮತ್ತು ದಿನಾಂಕ:18.10.2004ರ ಸೂಚನಾ ಪತ್ರವನ್ನು ದಿನಪತ್ರಿಕೆಗಳಲ್ಲಿ ಪ್ರಕಟಿಸಲಾಯಿತು. ಸದ್ರಿ ಸೂಚನಾ ಪತ್ರವು ದಿನಾಂಕ:20.11.2004ರ ಕೋಲಾರ ಪತ್ರಿಕೆ ಹಾಗೂ ಪ್ರಜಾವಾಣಿ ಪತ್ರಿಕೆಗಳಲ್ಲಿ ಪ್ರಕಟವಾಗಿರುತ್ತದೆ. ಈ ನೋಟೀಸಿನಲ್ಲಿ ನೌಕರರಿಗೆ ಕರ್ತವ್ಯಕ್ಕೆ ಹಾಜರಾಗುವಂತೆಯೂ, ಹಾಗೂ ದುರುಪಯೋಗಪಡಿಸಿಕೊಂಡಿರುವ ಸರ್ಕಾರಿ ಹಣವನ್ನು ತಹಶೀಲ್ದಾರರು, ಬಾಗೇಪಲ್ಲಿ ತಾಲ್ಲೂಕು ರವರಿಗೆ ಪಾವತಿಸುವಂತೆಯೂ ಸೂಚಿಸಲಾಗಿತ್ತು. ತಪ್ಪಿದಲ್ಲಿ ಸಾರ್ವಜನಿಕ ಸೇವೆಗೆ ಅನಧಿಕೃತ ಗೈರುಹಾಜರಿ ಹಾಗೂ ಸರ್ಕಾರಿ ಹಣ ದುರುಪಯೋಗದಂತಹ ಗಂಭೀರದ ಆಪಾದನೆಗಳಿಗಾಗಿ ಸದ್ರಿ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗುವುದೆಂದು ತಿಳಿಸಲಾಗಿತ್ತು. ಮೇಲ್ಕಂಡ ಸೂಚನಾ ಪತ್ರದಲ್ಲಿ ಸೂಚಿಸಿರುವಂತೆ ನೌಕರರು ಕರ್ತವ್ಯಕ್ಕೆ ಹಾಜರಾಗದೆ, ಸರ್ಕಾರದ ಹಣವನ್ನು ಪಾವತಿಸದೆ ಅನಧಿಕೃತ ಗೈರುಹಾಜರಿಯಲ್ಲೇ ಮುಂದುವರೆದಿರುತ್ತಾರೆ.

ಈ ಕಛೇರಿಯ ದಿನಾಂಕ:18.10.2004ರ ಸೂಚನಾ ಪತ್ರ ಪ್ರಕಟವಾಗಿ 1 ವರ್ಷ 6 ತಿಂಗಳು ಕಳೆದರೂ ನೌಕರರು ಕರ್ತವ್ಯಕ್ಕೆ ಹಾಜರಾಗದೆ, ದುರುಪಯೋಗಪಡಿಸಿಕೊಂಡಿರುವ ಹಣವನ್ನು ಪಾವತಿಸದೆ ಅನಧಿಕೃತ ಗೈರುಹಾಜರಿಯಲ್ಲಿ ಮುಂದುವರೆದ ಕಾರಣ, ಅವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಸಲುವಾಗಿ ಮತ್ತೊಂದು ನೋಟೀಸನ್ನು ಈ ಕಛೇರಿಯ ಸಮಕ್ರಮಾಂಕ ಮತ್ತು 17.05.2006ರಲ್ಲಿ ಹೊರಡಿಸಲಾಯಿತು. ಈ ನೋಟೀಸಿನಲ್ಲಿ ನೋಟೀಸು ಪ್ರಕಟವಾದ 15 ದಿನಗಳ ಒಳಗೆ ಅವರು ಕರ್ತವ್ಯಕ್ಕೆ ಹಾಜರಾಗಿ, ದುರುಪಯೋಗ ಪಡಿಸಿಕೊಂಡಿರುವ ಸರ್ಕಾರಿ ಹಣವನ್ನು ತಹಶೀಲ್ದಾರರು, ಬಾಗೇಪಲ್ಲಿ ತಾಲ್ಲೂಕು ರವರಿಗೆ ಪಾವತಿಸತಕ್ಕದ್ದೆಂದೂ, ತಪ್ಪಿದಲ್ಲಿ ಸಾರ್ವಜನಿಕ ಸೇವೆಗೆ ಅನಧಿಕೃತ ಗೈರುಹಾಜರಿ ಹಾಗೂ ಸರ್ಕಾರಿ ಹಣದುರುಪಯೋಗದ ಗಂಭೀರ ಆಪಾದನೆಗಳಿಗಾಗಿ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗುವುದೆಂದು ತಿಳಿಸಲಾಗಿತ್ತು. ಈ ನೋಟೀಸು ದಿನಾಂಕ:25.05.2006ರ ಕೋಲಾರ ವಾಣಿ ಹಾಗೂ ದಿನಾಂಕ:26.05.2006ರ ವಿಜಯ ಕರ್ನಾಟಕ ಪತ್ರಿಕೆಗಳಲ್ಲಿ ಪ್ರಕಟವಾಗಿರುತ್ತೆ.

ತಹಶೀಲ್ದಾರರು, ಬಾಗೇಪಲ್ಲಿ ತಾಲ್ಲೂಕು ರವರು ಉಲ್ಲೇಖ (6)ರಲ್ಲಿ ತಿಳಿಸಿರುವ ಪತ್ರದ ಮುಖೇನ ವರದಿ ಸಲ್ಲಿಸುತ್ತಾ, ಶ್ರೀ ಆರ್. ಸತೀಶ್‌ಕುಮಾರ್, ದ್ವಿ.ದ.ಸ. ರವರು ಈವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದೂ, ಹಾಗೂ ದುರುಪಯೋಗ ಪಡಿಸಿಕೊಂಡಿರುವ ಸರ್ಕಾರಿ ಹಣವನ್ನು ಕಛೇರಿಗೆ ಪಾವತಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ನೌಕರರು ದಿನಾಂಕ:28.10.2003ರಿಂದ ತಹಲ್‌ವರೆವಿಗೆ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಸರ್ಕಾರಿ ಹಣವನ್ನು ದುರುಪಯೋಗ ಪಡಿಸಿಕೊಂಡು, ಅವರು ಹಾಲಿ ಎಲ್ಲಿರುತ್ತಾರೆ? ಎಂಬುದು ತಿಳಿದು ಬರುತ್ತಿಲ್ಲವಾದ ಕಾರಣ, ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ನಿರ್ಧರಿಸಲಾಯಿತು.

**ಆದೇಶ**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 9 ರಡಿಯಲ್ಲಿ ದತ್ತವಾದ ಅಧಿಕಾರದಂತೆ ಸದ್ರಿ ನಿಯಮಾವಳಿ ನಿಯಮ 8(viii) ರಂತೆ ಶ್ರೀ ಆರ್. ಸತೀಶ್‌ಕುಮಾರ್, ದ್ವಿ.ದ.ಸ. (ಅನಧಿಕೃತ ಗೈರುಹಾಜರಿಯಲ್ಲಿ) ತಹಶೀಲ್ದಾರರ ಕಛೇರಿ, ಬಾಗೇಪಲ್ಲಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ. ಇವರು ದುರುಪಯೋಗಪಡಿಸಿಕೊಂಡಿರುವ ಸರ್ಕಾರಿ ಹಣ ಒಟ್ಟು ರೂ.63377/–ಗಳನ್ನು ಭೂ ಕಂದಾಯ ಬಾಕಿಯಂತೆ ವಸೂಲು ಮಾಡಲು ತಹಶೀಲ್ದಾರರು, ಬಾಗೇಪಲ್ಲಿ ತಾಲ್ಲೂಕು ರವರಿಗೆ ನಿರ್ದೇಶಿಸಲಾಗಿದೆ.

ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ.

ಪಿ.ಆರ್.337

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ: ಎಸ್‌ಆರ್–74/07, ದಿನಾಂಕ:30ನೇ ಜನವರಿ, 2008**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1) Shukla Bhavanishankar Krishna Bhat, Aged:58 Yrs. And Others. | 1) Mr. Mohan Murthy's. C/o. disi Patalamma Temple Street Near South end circle, Basavangudi, Bangalore.<br>2) The New India Assurance Company Ltd., Hospet. |

**ಪ್ರಕಟಣೆ**

ಶ್ರೀಮತಿ:ಶ್ರೀ Shukla Bhavanishankar krishna Bhat ಇವರು Mallapur Kumta ಇವರ ಮರಣದ ಪ್ರಯುಕ್ತ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮೃತ Krishna Bhat ಇವರು ಪ್ರತಿವಾದಿಗಳಾದ Mr. Mohanmurthy's Basavangudi, Bangalore ಇವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧ ಸಂಬಂಧಪಟ್ಟವರಿಗೆ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆಯ ಮೂಲಕ ತಿಳಿಯಪಡಿಸುವುದೇನೆಂದರೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಇಲ್ಲವೇ ಬೇರೆ ಶಾಸನಬದ್ಧ ವಾರಸುದಾರರೆಂದು ಪರಿಗಣಿಸಬೇಕೆಂದು ಇಚ್ಛಿಸಿದ್ದಲ್ಲಿ ಅಂಥವರು ಈ ಪ್ರಕಟಣೆಯು ಪ್ರಕಟವಾದ 30 ದಿವಸಗಳೊಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ದೇವರಾಜು ಎಂ.ಎನ್.**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ: ಎಸ್‌ಆರ್–75/07**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಶ್ರೀ ಹೊನ್ನಪ್ಪ ಹೊಸಬಾ ಮುಡಂಗಿ ವಯಸ್ಸು 56, ಮೀನುಗಾರರು<br>2) ಶ್ರೀಮತಿ ಪರಮೇಶ್ವರಿ ಹೊನ್ನಪ್ಪಾ ಮುಡಂಗಿ, 45 ವಯಸ್ಸು, ಮುಡಂಗಿ ಕುಮಟಾ ತಾ: | V/s | 1) ಶ್ರೀ ಬಾಬು ಚಂದ್ರಕಾಂತ ಕುಚಾಲ ಅಳ್ವಿದಂಡೇ ಕುಮಟಾ.<br>2) ದಿ ಡಿವಿಜನಲ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಕಾರವಾರ. |

**ಪ್ರಕಟಣೆ**

ಶ್ರೀಮತಿ:ಶ್ರೀ ಹೊನ್ನಪ್ಪಾ ಹೊಸಬಾ ಮುಡಂಗಿ ಇವರು ಶ್ರೀನಾಥ ಹೊನ್ನಪ್ಪ ಮುಡಂಗಿ ಇವರ ಮರಣದ ಪ್ರಯುಕ್ತ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮೃತ ಶ್ರೀನಾಥ ಇವರು ಪ್ರತಿವಾದಿಗಳಾದ ಶ್ರೀ ಬಾಬು ಚಂದ್ರಕಾಂತ ಕುಚಾಲ ಅಳ್ವಿದಂಡೇ, ಕುಮಟಾ ಇವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧ ಸಂಬಂಧಪಟ್ಟವರಿಗೆ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆಯ ಮೂಲಕ ತಿಳಿಯಪಡಿಸುವುದೇನೆಂದರೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಇಲ್ಲವೇ ಬೇರೆ ಶಾಸನಬದ್ಧ ವಾರಸುದಾರರೆಂದು ಪರಿಗಣಿಸಬೇಕೆಂದು ಇಚ್ಛಿಸಿದ್ದಲ್ಲಿ ಅಂಥವರು ಈ ಪ್ರಕಟಣೆಯು ಪ್ರಕಟವಾದ 30 ದಿವಸಗಳೊಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ದೇವರಾಜು ಎಂ.ಎನ್.**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ: ಎಸ್‌ಆರ್–76/07, ದಿನಾಂಕ:1ನೇ ಮಾರ್ಚ್, 2008**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಲಕ್ಷ್ಮಿ (ಮಾರ್ತಾಪ್ಪ ನಾಯ್ಕ) 45 ವಯಸ್ಸು.<br>2) ಶೇರುಗಾರ ಕೇರಿ, ಬೈಲೂರು, ಭಟ್ಕಳ. | V/s | 1) ಶ್ರೀ ಪಿ.ಜಿ. ಪೇಲ, ರೈಲ್ವೇ ಕಾಂಟ್ರಾಕ್ಟರ್ ದಿನಕರ್ ಸದನ ಕೆ.ಕೆ. ರಸ್ತೆ, ಕುಂದಾಪುರ.<br>2) ದಿ ಡಿವಿಜನಲ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಕಾರವಾರ. |

**ಪ್ರಕಟಣೆ**

ಶ್ರೀಮತಿ:ಶ್ರೀ ಲಕ್ಷ್ಮೀ ಮಾರ್ತಪ್ಪಾ ನಾಯ್ಕ ಇವರು ಮಾರ್ತಪ್ಪಾ ಇವರ ಮರಣದ ಪ್ರಯುಕ್ತ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮೃತ ಮಾರ್ತಪ್ಪ ಇವರು ಪ್ರತಿವಾದಿಗಳಾದ ಶ್ರೀ ಪಿ.ಜಿ.ಪೇಲ ರೈಲ್ವೆ ಕಾಂಟ್ರಾಕ್ಟರ್ ದಿನಕರ ಸದನ ಕೆ.ಕೆ. ರಸ್ತೆ, ಕುಂದಾಪುರ. ಇವರಲ್ಲಿ ಕೂಲಿಕಾರ ಎಂದು ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧ ಸಂಬಂಧಪಟ್ಟವರಿಗೆ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆಯ ಮೂಲಕ ತಿಳಿಯಪಡಿಸುವುದೇನೆಂದರೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಇಲ್ಲವೇ ಬೇರೆ ಶಾಸನಬದ್ಧ ವಾರಸುದಾರರೆಂದು ಪರಿಗಣಿಸಬೇಕೆಂದು ಇಚ್ಛಿಸಿದ್ದಲ್ಲಿ ಅಂಥವರು ಈ ಪ್ರಕಟಣೆಯು ಪ್ರಕಟವಾದ 30 ದಿವಸಗಳೊಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ದೇವರಾಜು ಎಂ.ಎನ್.**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ: ಎಸ್‌ಆರ್–77/07, ದಿನಾಂಕ:30ನೇ ಜನವರಿ, 2008**

| ಅರ್ಜಿದಾರರು | ಪ್ರತಿವಾದಿಗಳು |
|---|---|
| ಮಿತ್ರಾ ಕೋಂ ಈಶ್ವರ ನಾಯ್ಕ ವಯಸ್ಸು 50 ಮನೆ ಕೆಲಸ,<br>ಮನೆ: ಮಾಯಮ್ಮಿ ನಂಜೂರು ತಾ:ಹೊನ್ನಾವರ. | 1) ಚಂದ್ರಹಾಸ ಈಶ್ವರ ನಾಯ್ಕ, ವ್ಯಾಪಾರಸ್ಥರು, ಹೊನ್ನಾವರ.<br>2) ದಿ ಡಿವಿಜನಲ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಕಾರವಾರ. |

**ಪ್ರಕಟಣೆ**

ಶ್ರೀಮತಿ:ಶ್ರೀ ಮಿತ್ರಾ ಕೋಂ ಈಶ್ವರ ನಾಯ್ಕ ಇವರು ಮಾಯಮ್ಮಿ ನಂಜೂರು ಹೊನ್ನಾವರ ಇವರ ಮರಣದ ಪ್ರಯುಕ್ತ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮೃತ ಲಕ್ಷ್ಮೀಶ ಈಶ್ವರ ನಾಯ್ಕ ಇವರು ಪ್ರತಿವಾದಿಗಳಾದ ಚಂದ್ರಹಾಸ ಈಶ್ವರ ನಾಯ್ಕ ವ್ಯಾಪಾರಸ್ಥರು ಹೊನ್ನಾವರ, ಇವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧ ಸಂಬಂಧಪಟ್ಟವರಿಗೆ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆಯ ಮೂಲಕ ತಿಳಿಯಪಡಿಸುವುದೇನೆಂದರೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಇಲ್ಲವೇ ಬೇರೆ ಶಾಸನಬದ್ಧ ವಾರಸುದಾರರೆಂದು ಪರಿಗಣಿಸಬೇಕೆಂದು ಇಚ್ಛಿಸಿದ್ದಲ್ಲಿ ಅಂಥವರು ಈ ಪ್ರಕಟಣೆಯು ಪ್ರಕಟವಾದ 30 ದಿವಸಗಳೊಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ದೇವರಾಜು ಎಂ.ಎನ್.**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

ಪಿ.ಆರ್.338

## GOVERNMENT OF KARNATAKA,
## DIRECTORATE OF ECONOMICS AND STATISTICS, BANGALORE-1
### Consumer Price Index Numbers For Industrial Workers

No. DES 28 PWX 2008 Month: June, 2008

State: Karnataka Base: 1987-88=100 Date :11-09-2008

| | Group/Sub-Group | Bellary | Bhadra-vathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:**<br>(a) Cereals & Products | 449 | 466 | 515 | 455 | 519 | 459 | 412 | 503 | 427 | 467 | 472 |
| | (b) Pulses & Products | 404 | 426 | 482 | 492 | 417 | 431 | 420 | 516 | 407 | 411 | 477 |
| | (c) Oil & Fats | 320 | 349 | 336 | 336 | 307 | 332 | 342 | 333 | 271 | 331 | 342 |
| | (d) Meat, Fish & Eggs | 528 | 547 | 460 | 473 | 545 | 469 | 425 | 449 | 730 | 568 | 460 |
| | (e) Milk & Products | 369 | 304 | 403 | 389 | 372 | 422 | 305 | 416 | 356 | 396 | 340 |
| | (f) Condiments & Spices | 376 | 440 | 510 | 474 | 374 | 526 | 372 | 379 | 345 | 395 | 372 |
| | (g) Vegetables & Fruits | 509 | 431 | 711 | 512 | 400 | 448 | 393 | 512 | 355 | 412 | 623 |
| | (h) Other Food | 341 | 415 | 392 | 420 | 430 | 312 | 358 | 317 | 327 | 337 | 347 |
| | **FOOD GROUP INDEX** | **422** | **428** | **483** | **443** | **442** | **425** | **383** | **447** | **426** | **425** | **432** |
| II. | Pan, Supari, Tobacco & Intoxicants | 386 | 414 | 441 | 353 | 297 | 445 | 378 | 509 | 253 | 333 | 351 |
| III. | Fuel & Light | 400 | 344 | 315 | 480 | 324 | 353 | 359 | 333 | 292 | 482 | 300 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 273 | 258 | 267 | 379 | 338 | 266 | 368 | 381 | 242 | 521 | 215 |
| VI. | **MISCELLANEOUS:**<br>(a) Medical Care | 646 | 785 | 406 | 270 | 252 | 278 | 413 | 422 | 350 | 418 | 236 |
| | (b) Education, Recreation & Amusement | 360 | 422 | 524 | 249 | 398 | 504 | 355 | 322 | 543 | 478 | 422 |
| | (c) Transport & Communication | 419 | 512 | 407 | 655 | 618 | 481 | 400 | 569 | 611 | 393 | 470 |
| | (d) Personal Care & effects | 299 | 301 | 268 | 298 | 302 | 283 | 324 | 301 | 317 | 291 | 278 |
| | (e) Others<br>Miscellaneous Group | 353<br>404 | 369<br>415 | 329<br>364 | 464<br>355 | 286<br>343 | 275<br>342 | 307<br>350 | 279<br>320 | 256<br>403 | 490<br>414 | 261<br>314 |
| | **GENERAL INDEX** | **368** | **366** | **384** | **388** | **357** | **349** | **343** | **376** | **361** | **399** | **319** |
| | To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **...** | **...** |

for Director.

**Government of India,**

**Ministry of Labour**

**Labour Bureau**

**No. 112/1(KTK)/2006-CPI**

'Cleremount' Shimla-171 004

**CONSUMER PRICE INDEX NUMBERS FOR INDUSTRIAL WORKERS (BASE-2001=100)**

State: Karnataka Month: June, 08 Date:1st August, 2008

| Group/Sub-group/ Centre | Bangalore | Belgaum | Hubli-Dharwar | Mercara | Mysore |
|---|---|---|---|---|---|
| 1 | 2 | 3 | 4 | 5 | 6 |
| **I A:FOOD:** | | | | | |
| (a) Cereals & Products | 147 | 157 | 160 | 141 | 139 |
| (b) Pulses & Products | 141 | 142 | 148 | 147 | 135 |
| (c) Oils & Fats | 200 | 199 | 191 | 200 | 184 |
| (d) Meat, Fish & Eggs | 164 | 175 | 184 | 164 | 159 |
| (e) Milk & Products | 145 | 124 | 119 | 142 | 150 |
| (f) Condiments & Spices | 143 | 127 | 142 | 130 | 131 |
| (g) Vegetables & Fruits | 147 | 149 | 151 | 144 | 142 |
| (h) Other Food | 154 | 137 | 136 | 140 | 139 |
| **I-A FOOD GROUP** | 152 | 150 | 152 | 146 | 144 |
| I-Pan, Supari, Tobacco & Intoxicants | 155 | 133 | 138 | 122 | 149 |
| II-Fuel & Light | 128 | 127 | 138 | 105 | 138 |
| III-Housing Index | 141 | 119 | 131 | 104 | 125 |
| IV-Clothing, Bedding & Footwear | 104 | 113 | 111 | 114 | 112 |
| **V-Miscellaneous:** | | | | | |
| (a) Medical Care | 156 | 150 | 138 | 152 | 136 |
| (b) Education, Recreation & Amusement | 139 | 137 | 145 | 130 | 117 |
| (c) Transport & Communication | 177 | 186 | 180 | 161 | 163 |
| (d) Personal Care & effects | 130 | 134 | 137 | 127 | 129 |
| (e) Others | 133 | 131 | 134 | 128 | 162 |
| Miscellaneous Group | 151 | 148 | 148 | 138 | 139 |
| **GENERAL INDEX** | **145** | **142** | **145** | **134** | **138** |

**HARITA SABHARWAL**

PR-1068 DEPUTY DIRECTOR.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'plastic crates'.

**Ref:** Your Application Dated:10.03.2008 of M/s S.R. Marketing, No.52/1, 4th Cross, K.S. Garden Lalbagh Road, Bangalore-560 027.

In his application Dated:10.03.2008 cited above, M/s S.R. Marketing, No.52/1, 4th Cross, K.S. Garden Lalbagh Road, Bangalore-560 027 has sought clarification regarding the rate of tax applicable on 'plastic crates'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.351/07-08, Dated:29th August, 2008**

It is hereby clarified that 'plastic crates' falling under entry sl.no.47(from 01.04.2005 to 06.06.2005) and under entry sl.no.63 (from 07.06.2005) of Third Schedule to the Karnataka Value Added Tax Act 2003 are taxable at 4%.

**B.A. HARISH GOWDA**

PR-1081

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on plastic boxes, plastic cases and plastic crates for conveyance or packing of goods.

**Ref:** Your Application Dated:13.03.2008 of Sri Jaiprakash Jumani, Proprietor, of M/s G.A.G.Trading Company, No.320, Avenue Road, Bangalore-560 002.

In his application Dated:13.03.2008 cited above, Sri Jaiprakash Jumani, Proprietor, of M/s G.A.G.Trading Company, No.320, Avenue Road, Bangalore-560 002 has sought clarification regarding the rate of tax applicable on plastic boxes, plastic cases and plastic crates for conveyance or packing of goods.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.352/07-08, Dated:29th August, 2008**

It is hereby clarified that plastic boxes, plastic cases and plastic crates for conveyance or packing of goods falling under entry sl.no.47 (from 01.04.2005 to 06.06.2005) and under entry sl.no.63 (from 07.06.2005) of Third Schedule to the Karnataka Value Added Tax Act 2003 are taxable at 4%.

**B.A. HARISH GOWDA**

PR-1082

Commissioner of Commercial Taxes,
(Karnataka), Bangalore.